ಕಾಯಕವೇ ಕೈಲಾಸ



# ಸಿದ್ಧಗಂಗಾ



ಬಸವ ಜಯಂತಿಯ ಹಾರ್ದಿಕ ಶುಭಾಶಯಗಳು

ಸಂಪುಟ : ೫೮ ಮೇ ೨೦೨೨ ಸಂಚಿಕೆ : ೦೫

ಕೇಂದ್ರ ಗೃಹಸಚಿವ ಶ್ರೀ ಅಮಿತ್ ಷಾ ಅವರು ಏಪ್ರಿಲ್ ೧ ರಂದು ಶ್ರೀಮಠದಲ್ಲಿ ಏರ್ಪಡಿಸಿದ್ದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೫ನೇ ಜಯಂತಿ ಹಾಗೂ ಗುರುವಂದನ ಕಾರ್ಯಕ್ರಮವನ್ನು ಪರಮಪೂಜ್ಯರಾದ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಜ್ಯೋತಿ ಬೆಳಗಿಸಿ ಉದ್ಘಾಟಿಸಿದರು. ವೇದಿಕೆಯಲ್ಲಿ ಕೇಂದ್ರ ಸಚಿವರಾದ ಶ್ರೀ ಪ್ರಹ್ಲಾದ ಜೋಷಿ, ಕೇಂದ್ರ ರಾಜ್ಯ ಸಚಿವರಾದ ಶ್ರೀ ಭಗವಂತ ಖೂಬಾ, ಶ್ರೀ ಎ. ನಾರಾಯಣಸ್ವಾಮಿ, ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ, ಮಾಜಿ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪ, ಸಚಿವ ಶ್ರೀ ಬಿ.ಸಿ. ನಾಗೇಶ್, ಬಿಜೆಪಿ ಮುಖಂಡ ಶ್ರೀ ಸಿ.ಟಿ. ರವಿ, ರಾಜ್ಯ ಬಿಜೆಪಿ ಉಪಾಧ್ಯಕ್ಷ ಶ್ರೀ ಬಿ.ವೈ. ವಿಜಯೇಂದ್ರ ಹಾಗೂ ತುಮಕೂರು ಮಹಾನಗರ ಪಾಲಿಗೆ ಮಹಾಪೌರರಾದ ಶ್ರೀ ಬಿ.ಜಿ. ಕೃಷ್ಣಪ್ಪ ಮೊದಲಾದ ಗಣ್ಯರು ಉಪಸ್ತಿತರಿದ್ದರು.



ಕೇಂದ್ರ ಗೃಹಸಚಿವ ಶ್ರೀ ಅಮಿತ್ ಷಾ ಅವರಿಗೆ ವೇದಿಕೆಯಲ್ಲಿ ಉಪಸ್ಥಿತರಿದ್ದ ಗಣ್ಯರು ಕಾಮಧೇನು ಸ್ಮರಣಿಕೆ ನೀಡಿ ಗೌರವಿಸುತ್ತಿರುವುದು



ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿಯವರಿಗೆ ಸ್ಮರಣಿಕೆ ನೀಡಿ ಸನ್ಮಾನಿಸಿ ಆಶೀರ್ವದಿಸುತ್ತಿರುವುದು



ಕಾಂಗ್ರೆಸ್ ವರಿಷ್ಠರಾದ ಶ್ರೀ ರಾಹುಲ್ ಗಾಂಧಿಯವರಿಗೆ ಸ್ಮರಣಿಕೆ ನೀಡಿ ಗೌರವಿಸುತ್ತಿರುವುದು.



## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ



# ಸಿದ್ಧಗಂಗಾ

ಸಂಪುಟ : ೫೮ ಮೇ ೨೦೨೨ ಸಂಚಿಕೆ : ೦೫


ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು
ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಅಧ್ಯಕ್ಷರು
ಪ್ರಧಾನ ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ
ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ
ಪ್ರಕಾಶಕರು :
ಕೆ.ಬಿ. ಶಿವಶಂಕರಯ್ಯ
ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ವಿ. ಸೋಮಶೇಖರಯ್ಯ
ಎಸ್.ವಿ. ಸತೀಶ್‌ಕುಮಾರ್
ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.
ಮುದ್ರಕರು :
ಗೀತಾಂಜಲಿ ಗ್ರಾಫಿಕ್ಸ್
ಬಿ–೭೧, ಕೆ.ಎಸ್.ಎಸ್.ಐ.ಡಿ.ಸಿ. ಕೈಗಾರಿಕನಗರ
ರಾಜಾಜಿನಗರ, ಬೆಂಗಳೂರು–೫೬೦ ೦೧೦



ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ, ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.
ಮೊ : ೯೧೪೧೦ ೩೬೩೪೫


## ಒಳಪುಟಗಳಲ್ಲಿ ....................


೨ ಸಂಪಾದಕೀಯ

೩ ಶ್ರೀವಾಣಿ

೪ ಸಿದ್ಧಲಿಂಗೇಶ್ವರ ವಚನ – ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

೫ ಭಕ್ತ ಸಾಗರದ ನಡುವೆ ವಿಶ್ವವಿಭೂತಿ ಪುರುಷ, ತ್ರಿವಿಧ ದಾಸೋಹಿ ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೫ನೇ ಜಯಂತಿ ಹಾಗೂ ಗುರುವಂದನ ಮಹೋತ್ಸವಕ್ಕೆ ಕೇಂದ್ರ ಗೃಹ ಸಚಿವ ಶ್ರೀ ಅಮಿತ್ ಷಾ ಅವರಿಂದ ಚಾಲನೆ
ವರದಿ : ಎಚ್.ಎಸ್. ಸಿದ್ಧಗಂಗಪ್ಪ

೨೧ ರಸ್ತೆಗೆ ಪರಮಪೂಜ್ಯ ಶ್ರೀಗಳವರ ಹೆಸರು ನಾಮಕರಣ

೨೨ ಕಾಂಗ್ರೆಸ್ ವರಿಷ್ಠರಾದ ಶ್ರೀ ರಾಹುಲ್ ಗಾಂಧಿ ಶ್ರೀಮಠಕ್ಕೆ ಭೇಟಿ

೨೪ ಬಸವ ದಾಸೋಹ
(ಗ್ರಾಮಾಂತರ ಬಸವ ಜಯಂತಿ ಯೋಜನೆ)– ಕೋ.ರಂ. ಬಸವರಾಜು

೨೬ ಮಾತೃತ್ವಕ್ಕೆ ಮಹತ್ವ ತಂದು ಮಹಂತರಾದ
ಶ್ರೀ ಶಿವಕುಮಾರ ಮಹಾಶಿವಯೋಗಿಗಳು – ಬಿ.ಎಂ. ಪರಮೇಶ್ವರಪ್ಪ

೨೯ ಪ್ರತಿಷ್ಠಿತ ನಾಡೋಜ ಪ್ರಶಸ್ತಿಗೆ ಭಾಜನರಾದ
ಡಾ. ಗೊ.ರು. ಚನ್ನಬಸಪ್ಪ ಅವರಿಗೆ ಅಭಿನಂದನೆ

೩೦ ಬೆಂಗಳೂರು ಶಿವನಗರದ ಶ್ರೀ ಸಿದ್ಧಗಂಗಾ ಪ್ರೌಢಶಾಲೆಯ ವಿದ್ಯಾರ್ಥಿನಿ
ಕುಮಾರಿ ನಿತ್ಯಶ್ರೀ NMMS ಪರೀಕ್ಷೆಯಲ್ಲಿ ಆಯ್ಕೆ

೩೧ ನಡೆ–ನುಡಿಯೊಳಗೆ ಮತ್ತೊಂದು ಕಾಣದಂತಿರಬೇಕು
– ಸ.ರಾ. ಸುಳಕೂಡೆ



| | |
|---|---|
| ಚಂದಾ ವಿವರ | ಆಜೀವ ಸದಸ್ಯತ್ವ ರೂ. 1500/–<br>ವಾರ್ಷಿಕ ಚಂದಾ ರೂ. 250.00 ಬಿಡಿ ಪ್ರತಿ ರೂ. 20.00 |


email: siddaganganews@gmail.com





# ಪ್ರಧಾನ ಸಂಪಾದಕರ ನುಡಿ........

ಏಪ್ರಿಲ್ ೧ ರಂದು ಶ್ರೀಮಠದಲ್ಲಿ ನಡೆದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೫ನೇ ಜಯಂತ್ಯೋತ್ಸವ ಹಾಗೂ ಗುರುವಂದನ ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷರಾದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ಉಪಸ್ಥಿತಿಯಲ್ಲಿ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಕೇಂದ್ರ ಗೃಹ ಹಾಗೂ ಸಹಕಾರ ಸಚಿವ ಶ್ರೀ ಅಮಿತ್ ಷಾ ಅವರು ಕಾರ್ಯಕ್ರಮವನ್ನು ಉದ್ಘಾಟಿಸಿ ಪರಮಪೂಜ್ಯರು ಸಮಾಜಮುಖಿ ಸೇವೆಯಲ್ಲಿ ೮೮ ವರ್ಷಗಳ ಕಾಲ ತಮ್ಮನ್ನು ಸಮರ್ಪಿಸಿಕೊಂಡು ಸಲ್ಲಿಸಿರುವ ಅನನ್ಯ ಸೇವೆಯನ್ನು ಕೃತಜ್ಞತೆಯಿಂದ ಸ್ಮರಿಸಿದರು. ಸಮಾರಂಭಕ್ಕೂ ಮುನ್ನ ಪೂಜ್ಯ ಶ್ರೀ ಶಿವಯೋಗಿಗಳವರ ಗದ್ದುಗೆ ದರ್ಶನ ಮಾಡಿ ಪೂಜೆ ಸಲ್ಲಿಸಿದರು. ಐತಿಹಾಸಿಕವಾಗಿ ದಾಖಲಾಗುವಂತೆ ದಿವ್ಯ, ಭವ್ಯ ಹಾಗೂ 'ನ ಭೂತೋ ನ ಭವಿಷ್ಯತಿ' ಎಂಬಂತೆ ನಡೆದ ಸಮಾರಂಭಕ್ಕೆ ಸುಮಾರು ಎರಡು ಲಕ್ಷಕ್ಕೂ ಹೆಚ್ಚು ಭಕ್ತರು, ಅಭಿಮಾನಿಗಳು ಸಾಕ್ಷಿಯಾದರು. ನಾದಬ್ರಹ್ಮ ಡಾ. ಹಂಸಲೇಖ ಹಾಗೂ ಖ್ಯಾತ ಗಾಯಕ ಶ್ರೀ ವಿಜಯಪ್ರಕಾಶ್ ಅವರ ನೇತೃತ್ವದಲ್ಲಿ ನಡೆದ ಸಂಗೀತ ಹಾಗೂ ನೃತ್ಯ ಕಾರ್ಯಕ್ರಮ ಅಸಂಖ್ಯಾತ ಪ್ರೇಕ್ಷಕರ ಮನಸ್ಸನ್ನು ರಂಜಿಸುವಲ್ಲಿ ಯಶಸ್ವಿಯಾಯಿತು. ಕಾರ್ಯಕ್ರಮ ಸುವ್ಯವಸ್ಥಿತವಾಗಿ ಜನರ ಮನಸ್ಸಿನಲ್ಲಿ ಬಹುಕಾಲ ಹಚ್ಚಹಸಿರಾಗಿರುವಂತೆ ಮಾಡುವಲ್ಲಿ ಸಹಕರಿಸಿದ ಎಲ್ಲರೂ ಅಭಿನಂದನಾರ್ಹರು.

* * *

ಹನ್ನೆರಡನೆಯ ಶತಮಾನದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ನಡೆದ ಸಾಮಾಜಿಕ ಚಳವಳಿ ಒಂದು ವರ್ಗಕ್ಕೆ, ಒಂದು ಸಮಾಜಕ್ಕೆ ಸೀಮಿತವಾಗಿರಲಿಲ್ಲ. ಆ ಚಳವಳಿ ಒಬ್ಬ ವ್ಯಕ್ತಿಯ ಮಾನಸಿಕ, ಭೌತಿಕದ ಮೇಲೆ ಯಾವುದೇ ರೀತಿಯ ಒತ್ತಾಯವಿಲ್ಲದೆ, ಸೌಮ್ಯತೆ, ಸಜ್ಜನಿಕೆಯ ರೇಖೆಯನ್ನು ದಾಟದೆ ಬೌದ್ಧಿಕತೆಯನ್ನು ಪ್ರೇರೇಪಿಸುವ ಒಂದು ವಿಶಿಷ್ಟ ವೈಚಾರಿಕ ಚಳವಳಿಯಾಗಿತ್ತು. ಜಾತಿ ರಹಿತ ಆದರ್ಶ ಸಮಾಜ ನಿರ್ಮಾಣ, ಅಂತಹ ಸಮಾಜದ ಸರ್ವಾಂಗೀಣ ಅಭಿವೃದ್ಧಿ ಚಳವಳಿಯ ಹಿಂದಿನ ಆಶಯವಾಗಿತ್ತು. ಕರ್ನಾಟಕದಲ್ಲಿ ಬಸವಣ್ಣನವರ ನೇತೃತ್ವದಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ಇತಿಹಾಸದಲ್ಲಿ ಬಸವಣ್ಣನವರ ವಿಚಾರಗಳು ಸರ್ವರು ಪಾಲಿಸುವಂತಹ ಜೀವನ ಮೌಲ್ಯಗಳೆನಿಸಿದವು.

ಜ್ಞಾನ ಪಡೆಯುವುದು ಎಲ್ಲರ ಮೂಲಭೂತ ಹಕ್ಕು ಎಂದು ಹೇಳಿ ಅದರಂತೆ ನಡೆದುಕೊಂಡಿದ್ದರಿಂದಲೇ ಅವರಿಗೆ ವಿದ್ಯೆಯಿಂದ ವಂಚಿತರಾಗಿದ್ದ ಸಮಾಜದಲ್ಲಿನ ಕೆಳವರ್ಗದವರು ಅಗಸ್ತ್ಯನ ದಾಹದಿಂದ ಜ್ಞಾನಾರ್ಜನೆಯ ಕಾರ್ಯದಲ್ಲಿ ಮಗ್ನವಾಯಿತು. ಕುಂಬಾರರು, ಮಡಿವಾಳರು, ಹಾಲು ಮಾರುವವರು, ಕಸ ಗುಡಿಸುವವರು ಹೀಗೆ ವಿಭಿನ್ನ ವೃತ್ತಿಗೆ ಸಂಬಂಧಿಸಿದ ವ್ಯಕ್ತಿಗಳೆಲ್ಲಾ ಜ್ಞಾನಕ್ಕಾಗಿ ಹಾತೊರೆದುದಷ್ಟೇ ಅಲ್ಲದೆ ತಾವು ವಿಚಾರವಂತರಾಗಿ, ವೈಚಾರಿಕ ಮನೋಭಾವನೆಯನ್ನು ಬೆಳೆಸಿಕೊಂಡು ಪ್ರತಿಭಾವಂತ ವಚನಕಾರರಾಗಿ ರೂಪುಗೊಂಡು ಒಂದು ವಿಸ್ಮಯ ಲೋಕವನ್ನೇ ನಿರ್ಮಿಸಿದುದು ಅಪೂರ್ವ ಚಾರಿತ್ರಿಕ ದಾಖಲೆ.

ಬಸವಣ್ಣನವರು ಸಾಮಾಜಿಕ ಅಸಮಾನತೆ, ಅಸ್ಪೃಶ್ಯತೆಗಳನ್ನು ತೊಡೆದು ಹಾಕಲು ತಮ್ಮ ಜೀವನವನ್ನೇ ಸಮರ್ಪಿಸಿಕೊಂಡರು. ಇಡೀ ಹೃದಯವಂತಿಕೆಯ ಬೌದ್ಧಿಕ ಚಿಂತನೆಯ ಮೊತ್ತವನ್ನು ಭಕ್ತಿಯ ಸಾರಥ್ಯದಲ್ಲಿ ವಚನಗಳ ಮೂಲಕ ಪ್ರತಿಪಾದಿಸಿದರು. ನಡೆಯಲ್ಲಿ, ನುಡಿಯಲ್ಲಿ ಬದುಕಿನ ಶುದ್ಧತೆಯನ್ನು ತೋರಿಸಿದರು. ದಲಿತರೊಡನಾಟ, ಸಹಬಾಳ್ವೆ ಸಹಯೋಗವನ್ನು, ಬಂಧುತ್ವವನ್ನು ಸಮಾಜದ ಸ್ವಾಸ್ಥ್ಯದ ಪ್ರತೀಕವೆಂದು ಬಿಂಬಿಸಿದರು.

ಬಸವಾದಿ ಶರಣರು ಸಮಾಜಕ್ಕೆ ನೀಡಿದ ಅದ್ಭುತ ಕೊಡುಗೆ ಎಂದರೆ ಕಾಯಕ ಮತ್ತು ದಾಸೋಹ, ಸಮಾಜ ಅಭಿವೃದ್ಧಿ ಪಥದಲ್ಲಿ ಮುನ್ನಡೆಯ ಬೇಕಾದರೆ ಪ್ರತಿಯೊಬ್ಬರು ದುಡಿಯಬೇಕು ಹಾಗೂ ಪ್ರಾಮಾಣಿಕತೆಯಿಂದ ಬಂದ ಗಳಿಕೆಯಲ್ಲಿ ಸ್ವಲ್ಪ ಭಾಗವನ್ನು ದಾಸೋಹ ರೂಪದಲ್ಲಿ ಸಮಾಜಕ್ಕೆ ವಿನಿಯೋಗಿಸಬೇಕು ಎಂಬ ತತ್ತ್ವವನ್ನು ಆಚರಣೆಗೆ ತರುವಲ್ಲಿ ಅರಿವು ಮೂಡಿಸಿದರು.

ಪತ್ರಿಕೆಯ ಓದುಗರೂ, ಚಂದಾದರರಿಗೆ ಬಸವ ಜಯಂತಿಯ ಹಾರ್ದಿಕ ಶುಭಾಶಯಗಳನ್ನು 'ಸಿದ್ಧಗಂಗಾ' ಕೋರುತ್ತದೆ.

**ಪ್ರೊ. ಹೆಚ್.ವಿ. ವೀರಭದ್ರಯ್ಯ**







# ಶ್ರೀವಾಣಿ

## "ಅಷ್ಟಗ್ರಹ ದೋಷ ನಿವಾರಣಾ ಪೂಜಾ ಸಂಸ್ಥೆಗಳು"

ದೇಶದಲ್ಲಿ ಅಷ್ಟಗ್ರಹದೋಷ ತಲೆ ಹಾಕಿತು ಎಂದು ಜ್ಯೋತಿಷಿಗಳು ಪ್ರಚಾರ ಮಾಡಿದರು. ಇಡಿ ದೇಶಾದ್ಯಂತ ವಿದ್ವಾಂಸರು ದೋಷದಿಂದಾಗುವ ಅನಾಹುತಗಳನ್ನು ಪತ್ರಿಕೆಗಳಲ್ಲಿ ಪ್ರಚಾರ ಮಾಡಿದರು. ಜನರ ಹೃದಯದಲ್ಲಿ ಭೀತಿ ಆವರಿಸಿತು. ಅಷ್ಟಗ್ರಹ ಸೇರುವ ಹೊತ್ತಿನಲ್ಲಿ ಪ್ರಪಂಚ ಮುಳುಗುತ್ತದೆ. ವ್ಯಕ್ತಿಗಳು ನಾಶವಾಗುತ್ತಾರೆಂದೇ ನಂಬಿಕೆ ಮೂಡಿತು. ಆದರೆ ಅದರ ಪರಿಹಾರಕ್ಕಾಗಿ ಅಲ್ಲಲ್ಲಿ "ಅಷ್ಟಗ್ರಹ ದೋಷ ನಿವಾರಣಾ ಪೂಜಾ ಸಂಸ್ಥೆಗಳು" ದೇಶಾದ್ಯಂತ ಹುಟ್ಟಿಕೊಂಡವು. ಬೆಂಗಳೂರಿನಲ್ಲಿಯೂ ಅಂಥ ಒಂದು ಸಂಸ್ಥೆ ಪ್ರಾರಂಭವಾಯಿತು. ನಲವತ್ತನೆಯ ದಿನ ಉಪಾಸನೆ ಏರ್ಪಾಟಾಯಿತು. ಉಪಾಸನೆಯ ಕೊನೆಯ ದಿನ ಮಹಾಮಂಗಳಾರತಿಯ ಕಾಲದಲ್ಲಿ ಯಾಗಕುಂಡದಿಂದ ಅಮೃತ ಉದ್ಭವವಾಗುತ್ತದೆಂದು ಪ್ರಚಾರವಾಯಿತು. ಕೊನೆಯ ದಿನದಂದು ಅಮೃತ ಕುಡಿದು ಅಮರತ್ವ ಸಾಧಿಸುವ ಮುಕ್ತೋಪಾಸಕತಂಡವಾಗಿ ಮಂತ್ರಿಗಳು, ಅಧಿಕಾರಿಗಳು, ಶ್ರೀಮಂತರು, ದೊಡ್ಡ ದೊಡ್ಡ ವಿದ್ವಾಂಸರು, ಜ್ಞಾನಿಗಳು ಪೂರ್ಣಾಹುತಿಯ ಕಾಲಕ್ಕೆ ನುಗ್ಗಿದರು. ಎಳ್ಳು ಹಾಕಲು ಜಾಗವಿಲ್ಲದಷ್ಟು ಜನಸಂಖ್ಯೆ ನಿಶ್ಯಬ್ದವಾಗಿ ಅಮೃತೋದ್ಭವವನ್ನು ತೀವ್ರಾಸಕ್ತಿಯಿಂದ ಬಿಡುಗಣ್ಣವರಾಗಿ ಕಾದು ನೋಡುತ್ತಿದ್ದಂತೆ ಘಂಟಾಧ್ವನಿ, ಮಂತ್ರಪಠಣೆ ಮೊಳಗಿದವು. ಮಂಗಳಾರತಿ ಎತ್ತಿದೊಡನೆ ಕಾರಂಜಿಯಂತೆ ಅಮೃತ ಪಟಪಟನೆ ಚಿಮ್ಮಿತು. ಅಮೃತಕ್ಕಾಗಿ ಗುಜುಗುಜು ಪ್ರಾರಂಭವಾಗಿ ನೂಕುನುಗ್ಗಲಾಯಿತು. ಕಾಣಿಕೆ ಮಾತ್ರ ತಟ್ಟೆ ತಟ್ಟೆಗಳೇ ತುಂಬಿದವು. ಎಲ್ಲರೂ ಅಮೃತಾನಂದದಿಂದ ಅಮರರಾದೆವೆಂದೇ ಬಗೆದು ಸಂತೃಪ್ತಿಯ ಉಸಿರುಬಿಟ್ಟರು. ಅಷ್ಟಗ್ರಹ ದೋಷ ಅಮೃತಪಾನದಿಂದ ನಿವಾರಣೆಯಾಯಿತು. ಆದರೆ ಅವರಲ್ಲಿ ಒಬ್ಬ ಬುದ್ಧಿವಂತ ಚಿಂತಿಸಿದ. ಏನೇನೋ ಗೊಣಗಿದ. ಅವನ ಜೊತೆಗೆ ಮತ್ತಿಬ್ಬರು ಸೇರಿದರು. ಚರ್ಚಿಸಿದರು, ಒಂದು ತೀರ್ಮಾನಕ್ಕೆ ಬಂದರು. "ಅಂದು ದೇವದಾನವರು ಪಾಲ್ಗಡನ್ನು ಕಡೆದಾಗ ಅಮೃತೋದ್ಭವವಾಗಿತ್ತು. ಹೀಗೆ ಉದ್ಭವಗೊಂಡ ಅಮೃತ ದಾನವರಿಗೆ ದೂರವಾಗಿ ದೇವತೆಗಳ ಸ್ವತ್ತಾಗಿ ಸ್ವರ್ಗದಲ್ಲಿ ಭದ್ರವಾಗಿ ರಕ್ಷಣೆಯಾಯಿತು. ಎಂದೂ ಮತ್ತೊಮ್ಮೆ ಉದ್ಭವವಾದ ಪ್ರಸಂಗ ಒದಗಿಲ್ಲ. ಈಗ ಅಮೃತವೇನಿದ್ದರೂ ಆಕಾಶದಿಂದ ಸುರಿಯಬೇಕೇ ಹೊರತು ಗಟ್ಟಿಯಾದ ಸೀಮೆಂಟಿನ ಭೂಮಿಯಲ್ಲಿ ಅದೂ ಅಮೃತ ಪಾತಾಳದಿಂದ ಚಿಮ್ಮುವ ಬಗೆಯೆಂತು?

ಹೊರಬಂದು ಪತ್ತೇದಾರಿ ಕಾರ್ಯದಲ್ಲಿ ತೊಡಗಿದರು. ಅಲ್ಲಿ ಇಲ್ಲಿ ತಮ್ಮ ಹದ್ದಿನ ಕಣ್ಣನ್ನು ಹಾಯಿಸಿ, ಮೊಲದ ಕಿವಿ ಮುಂದೆ ಚಾಚಿದರು. ಆಗ ಪತ್ತೆಯಾಯಿತು, ಅಮೃತ ಜಲದ ಕಣ್ಣು. ಅಮೃತೋದ್ಭವ ಯಜ್ಞಮಂದಿರಕ್ಕೆ ಅನತಿ ದೂರದಲ್ಲೇ ಒಂದು ಗುಪ್ತವಾದ ಕೊಠಡಿ. ಅಲ್ಲಿಂದ ಮಂದಿರಕ್ಕೆ ಪೈಪು ಹಾಕಲ್ಪಟ್ಟಿದೆ. ಕೊಠಡಿಯಲ್ಲಿ ಒಂದು ದೊಡ್ಡ ತೊಟ್ಟಿ, ಅದರ ತುಂಬ ಹಾಲು ಬೆಣ್ಣೆ ತುಂಬಿದೆ. ಅದಕೆ ಒಂದು ಎಲೆಕ್ಟ್ರಿಕಲ್ ಪಂಪ್ ಹಾಕಿದೆ. ಗಂಟೆ ಧ್ವನಿಯೇ ಪಂಪ್ ಸ್ಟಾರ್ಟ್ ಮಾಡಲು ಸಿಗ್ನಲ್ಲು. ಪಂಪ್ ಸ್ಟಾರ್ಟ್ ಆದೊಡನೆಯೇ ಅಮೃತ ಉಕ್ಕಿ ಉಕ್ಕಿ ಬರುತ್ತದೆ. ಭಕ್ತರು ಭಗವದ್ಭಕ್ತರ ಮೋಸ ಜಾಲಕ್ಕೆ ಬಿದ್ದು "ಕೊಳಚೆ ಅಮೃತವನ್ನು ಕುಡಿದಿದ್ದೇ ಕುಡಿದಿದ್ದು. ಮುಕ್ತಿ ಪಡೆದಿದ್ದೇ ಪಡೆದಿದ್ದು".

ಆದುದರಿಂದ ಭಗವಂತನ ಹೆಸರಿನಲ್ಲಿ ನಡೆಯುತ್ತಿರುವ ಇಂಥ ಮೋಸ, ವ್ಯವಹಾರ ನಿಲ್ಲಬೇಕು. ಶುದ್ಧವಾದ ಭಕ್ತಿಯೊಂದೇ ಅವನ ಹೆಸರಿನಲ್ಲಿ ದೊರಕುವಂತಾಗಬೇಕು. ಆಗಲೇ ನಮ್ಮ ಧರ್ಮಕ್ಕೊಂದು ಬೆಲೆ.

೧೦-೦೬-೧೯೭೧

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ಜ್ಯೋತಿಯಿದ್ದ ಮನೆಯಲ್ಲಿ ಕತ್ತಲೆಯುಂಟೆ**
**ಲಿಂಗವಿದ್ದಂಗದಲ್ಲಿ ಅಜ್ಞಾನವುಂಟೆ?**
**ಅಜ್ಞಾನವಿಲ್ಲವಾಗಿ ಅಂಗವಿಕಾರವಿಲ್ಲ**
**ಅಂಗವಿಕಾರವಿಲ್ಲವಾಗಿ ಹೆಂಗಳಿಗೆ ಸೋಲರು**
**ಹೊಂಗಳಿಗೆಣಿಸರು ಮಹಾಲಿಂಗೈಕ್ಯರಯ್ಯಾ ನಿಮ್ಮ ಪ್ರಮಥರು**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ ॥**

ಮಹೇಶ್ವರ ಪ್ರಾಣಲಿಂಗಿ-ಮಹೇಶ್ವರ ಸ್ಥಲದೊಳಗಣ ಪ್ರಾಣಲಿಂಗಿ ಸ್ಥಲದಾಚರಣೆಯನು ನಿರೂಪಿಸಿಹರು-ಜ್ಯೋತಿಯಿದ್ದ ಮನೆಯಲ್ಲಿ-ದೀಪವಿರುವಂಥ ಮಂದಿರದಲ್ಲಿ, ಕತ್ತಲೆ-ಕಾವಳವು, ಉಂಟೇ-ಇಲ್ಲವು; ಲಿಂಗವಿದ್ದಂಗದಲ್ಲಿ-ಲಿಂಗವು ನೆಲೆಗೊಂಡಿರುವಂಥ ಅಂಗದಲ್ಲಿ, ಅಜ್ಞಾನವುಂಟೆ-ಭೂತಕಾಯ, ಜಡಕಾಯ, ಉಂಟೇ, ಇಲ್ಲವು; ಅಜ್ಞಾನವಿಲ್ಲವಾಗಿ-ಭೂತಕಾಯ ಜಡಕಾಯ ಉಂಟಾಗಿಲ್ಲವಾಗಿ, ಅಂಗವಿಕಾರವಿಲ್ಲ-ತನುವಿನ ಮನ್ಮಥ ವಿಕಾರ ಉಂಟಾಗಿಲ್ಲವು; ಅಂಗವಿಕಾರವಿಲ್ಲವಾಗಿ-ತನುವಿನ ಮನ್ಮಥವಿಕಾರ ಉಂಟಾಗಿಲ್ಲವಾಗಿ, ಹೆಂಗಳಿಗೆ-ಸ್ತ್ರೀಯರಿಗೆ, ಸೋಲರು-ಇಚ್ಛೈಸರು; ಹೊಂಗಳಿಗೆಣಿಸರು: ಹೊಂಗಳಿಗೆ-ದ್ರವ್ಯಕ್ಕೆ, ಎಣಿಸರು-ಇಚ್ಛೈಸರು; ಮಹಾಲಿಂಗೈಕ್ಯರಯ್ಯಾ-ಶಿಖಿ ಕರ್ಪೂರ ಸಂಯೋಗವಾದ ಹಾಂಗೆ ಮಹಾಲಿಂಗದಲ್ಲಿ ಕೂಡಲ್ಪಟ್ಟ ಶಿವಲಿಂಗೈಕ್ಯರಯ್ಯಾ, ನಿಮ್ಮ ಪ್ರಮಥರು-ನಿಮ್ಮ ಪ್ರಮಥಗಣಂಗಳು; ಮಹಾಲಿಂಗ ಗುರುಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು-ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಋಷಿಬಾನುಗಳಿಗಿಂತ ಶೀಲ ತಾ ದೊಡ್ಡದು
ಗುರುಲಿಂಗಜಂಗಮದ ಆಭರಣ । ಎನಿಸಿದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಗುರುವೆ ಪರಮಕರುಣಸಿಂಧುವೆ ಬಂಧುವೆ
ಕರಮುಗಿದು ಬೇಡುವೆನು ಕರುಣಿಸು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹರಿವ ನದಿಯಾಗಿರು ಅರಳುವ ಹೂವಾಗು
ಸುಳಿದು ಸೂಸುವ ತಂಬೆಲರಾಗು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣರ ಚರಿತವ ಅರಿವಿನಿಂದಲಿ ಓದು
ಅರಿವೆ ಕುರುಹೆಂಬುದನರಿಯೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಇಷ್ಟಲಿಂಗದ ಪೂಜೆ ನಿಷ್ಠೆಯಿಂದಲಿ ಮಾಡು
ಕಷ್ಟಕಾರ್ಪಣ್ಯ ಹರಿವುದೆಂದರುಹದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೀನರ ದೀಪಕ ಬಡವರಿಗೆ ನೀ ಬಂಧು
ಕೊಡುಗೈಯ ಜಂಗಮ ನನ್ನಸ್ವಾಮಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಯಾರೂ ಇಲ್ಲದವರಿಗೆ ತಾಯಾದೆ ತಂದ್ಯಾದೆ
ಊರುಗೋಲಾದೆ ನನ್ನ ಸ್ವಾಮಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಬಸವಪಥದಲಿ ನಡೆದು ಹಸಮಾಡಿಕೊ ಬದುಕ
ಕಸವಾಗದಿರಲಿ ಜೀವನವೂ ಎಂದ್ಹರುಹಿದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಿದ್ಧಗಂಗಾ ಸಾಣೆಗೆ ಗಂಧದ ಕೊರಡಾದೆ
ಸಿದ್ಧರಿಗೆಲ್ಲ ಗುರುವಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಶರಣ ಸಾಹಿತ್ಯವೆ ಪರಮಪಾವನವೆನುತ
ಅರಿವಿತ್ತು ಕರಸಿರಿಗು ಸಲಹಿದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೊ. ಹೆಚ್.ವಿ. ವೀರಭದ್ರಯ್ಯ



## ಗುರುವಂದನೆ

# ಭಕ್ತ ಸಾಗರದ ನಡುವೆ ವಿಶ್ವವಿಭೂತಿ ಪುರುಷ, ತ್ರಿವಿಧ ದಾಸೋಹಿ ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೫ನೇ ಜಯಂತಿ ಹಾಗೂ ಗುರುವಂದನ ಮಹೋತ್ಸವಕ್ಕೆ ಕೇಂದ್ರ ಗೃಹ ಸಚಿವ ಶ್ರೀ ಅಮಿತ್ ಷಾ ಅವರಿಂದ ಚಾಲನೆ

ವರದಿ : ಎಚ್.ಎಸ್. ಸಿದ್ಧಗಂಗಪ್ಪ*

ವಿಶ್ವದ ಆಧ್ಯಾತ್ಮಿಕ ಭೂಪಟದಲ್ಲಿ ಸಿದ್ಧಗಂಗಾ ಕ್ಷೇತ್ರಕ್ಕೆ ಒಂದು ವಿಶಿಷ್ಟ ಸ್ಥಾನವನ್ನು ತಂದುಕೊಟ್ಟ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಈ ಶತಮಾನ ಕಂಡ ಮಹಾಸಂತರು, ಲೋಕಜಂಗಮರು, ಬಸವಾದಿ ಶರಣರ ಆದರ್ಶಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ಶ್ರೀಮಠದಲ್ಲಿ ಸಾಕಾರಗೊಳಿಸಿ ಲಕ್ಷಾಂತರ ಮಕ್ಕಳಿಗೆ ಬೆಳಕಾದವರು. ಶ್ರೀಮಠವನ್ನು 'ಮಹಾಮನೆ'ಯನ್ನಾಗಿ ಮಾಡಿದ ದಾಸೋಹಿಗಳು, ಕಾಯಕ ಮತ್ತು ದಾಸೋಹಕ್ಕೆ ಮೌಲ್ಯವನ್ನು ತಂದುಕೊಟ್ಟವರು. ಲೋಕಕಲ್ಯಾಣಕ್ಕಾಗಿ ತಮ್ಮನ್ನು ಸಮರ್ಪಿಸಿಕೊಂಡು ಶ್ರೀಗಂಧದಂತೆ ತೇದು ಸಮಾಜಕ್ಕೆ ಕಂಪು ನೀಡಿದವರು. ಸಮಾಜ, ಧಾರ್ಮಿಕ ಸೇವೆಯ ಮೂಲಕ 'ಆಧುನಿಕ ಬಸವಣ್ಣ' ಎಂಬ ಹೆಗ್ಗಳಿಕೆಗೆ ಪಾತ್ರರಾದ ಮಹಾಮಾನವತಾವಾದಿಗಳು. ಮಕ್ಕಳಲ್ಲಿ ದೇವರನ್ನು ಕಂಡವರು, ಮಕ್ಕಳಲ್ಲಿ ಮಾತೃವಾತ್ಸಲ್ಯವನ್ನು ಧಾರೆ ಎರೆದ ಮಾತೃಹೃದಯಿ, ಕಾರುಣ್ಯಮೂರ್ತಿಗಳು. ಪರಿಶುದ್ಧವಾದ ನಡೆ-ನುಡಿಯ ಮೂಲಕ, ಉದಾತ್ತವಾದ ಮಾನವೀಯ ಮೌಲ್ಯಗಳನ್ನು ಸಾಕಾರಗೊಳಿಸುವುದರ ಮೂಲಕ ಮಾನವನು ದೈವತ್ವಕ್ಕೇರಬಹುದು ಎಂಬುದಕ್ಕೆ ನಿದರ್ಶನರಾಗಿ ನಡೆದಾಡುವ ದೇವರು ಎಂಬ ಕೀರ್ತಿಗೆ ಭಾಜನರಾದವರು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಎಂದು ಹೇಳುವಾಗ ಧನ್ಯತಾಭಾವನೆ ಉಂಟಾಗುತ್ತದೆ.



* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೭೧

ಏಪ್ರಿಲ್ ೧, ಶ್ರೀಮಠ ಹಾಗೂ ಆಧ್ಯಾತ್ಮಿಕ ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡುವ ಪವಿತ್ರವಾದ ದಿನ. ಲೋಕಕಲ್ಯಾಣಕ್ಕಾಗಿ ೮೮ ವರ್ಷಗಳ ಸುದೀರ್ಘಕಾಲ ತಮ್ಮನ್ನು ಸಮರ್ಪಿಸಿಕೊಂಡು ನಿಸ್ವಾರ್ಥದಿಂದ ಸೇವೆ ಸಲ್ಲಿಸಿದ ತ್ರಿವಿಧ ದಾಸೋಹಿ, ನಮ್ಮೆಲ್ಲರ ಆರಾಧ್ಯದೈವ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಈ ಭುವಿಯಲ್ಲಿ ಅವತರಿಸಿದ ಪುಣ್ಯದಿನ. ಲಕ್ಷಾಂತರ ಬಡಮಕ್ಕಳಿಗೆ ಜಾತಿ ಭೇದವೆಣಿಸದೆ ಎಲ್ಲರಿಗೂ ಆಶ್ರಯ ನೀಡಿ ಅಕ್ಷರ ಶಿಕ್ಷಣದ ಜತೆಗೆ ನೈತಿಕ ಶಿಕ್ಷಣವನ್ನು ನೀಡಿ ಸಂಸ್ಕಾರವಂತರನ್ನಾಗಿ ಮಾಡಿ ಸ್ವಾಭಿಮಾನದಿಂದ ಬದುಕನ್ನು ಕಟ್ಟಿಕೊಳ್ಳುವಂತೆ ಮಾಡಿದ ಮಹಾಶಿವಯೋಗಿಗಳು. ಇಂತಹ ಆಧ್ಯಾತ್ಮಿಕ ಸೂರ್ಯನ ೧೧೫ನೇ ಜಯಂತ್ಯೋತ್ಸವವನ್ನು ಶ್ರೀಮಠದಲ್ಲಿ ಅದ್ಧೂರಿಯಾಗಿ, ಅರ್ಥಪೂರ್ಣವಾಗಿ, ಸಮಾರಂಭ ಎಂದರೆ ಹೀಗಿರಬೇಕು ಎನ್ನುವಂತೆ ಲಕ್ಷಾಂತರ ಭಕ್ತರ ಸಮ್ಮುಖದಲ್ಲಿ ಹಬ್ಬದಂತೆ ಆಚರಿಸಲಾಯಿತು.

ಕಳೆದ ಎರಡು ವರ್ಷಗಳಿಂದ ಕೋವಿಡ್‌ನಿಂದ ಸಾಂಕೇತಿಕವಾಗಿ, ಸರಳವಾಗಿ ಆಚರಿಸಲಾಗಿತ್ತು. ಈ ವರ್ಷ ಕೋವಿಡ್ ಕರಾಳ ಛಾಯೆಯಿಂದ ಹೊರಬಂದುದರಿಂದ ವೈಭವದಿಂದ 'ನ ಭೂತೋ ನ ಭವಿಷ್ಯತಿ' ಎಂಬಂತೆ ಆಚರಿಸಿ ಭಕ್ತಿ ನಮನವನ್ನು ಸಲ್ಲಿಸಲಾಯಿತು. ನಾಡಿನ ಮೂಲೆ ಮೂಲೆಗಳಿಂದ ಭಕ್ತರು, ಅಭಿಮಾನಿಗಳು ಸಾಗರೋಪಾದಿಯಾಗಿ ಶ್ರೀಮಠಕ್ಕೆ ಹರಿದುಬಂದು ಭವ್ಯ ಸಮಾರಂಭಕ್ಕೆ ಸಾಕ್ಷಿಯಾದರು. ಶ್ರೀಮಠದಲ್ಲಿ ನಡೆಯುವ ಕಾರ್ಯಕ್ರಮಗಳಿಗೆ ಆಹ್ವಾನದ ವೀಳ್ಯ ನೀಡ ಬೇಕಾಗಿಲ್ಲ. ವಿಷಯ ಒಬ್ಬರಿಂದ ಒಬ್ಬರಿಗೆ ಹರಡಿ ತಂಡೋಪತಂಡವಾಗಿ ಆಗಮಿಸುತ್ತಿರುವುದು ಪರಮಪೂಜ್ಯ ಶ್ರೀಗಳು ಜಾತಿ ವರ್ಗ ಭೇದವೆಣಿಸದೆ ಎಲ್ಲರಿಗೂ ಆಶ್ರಯ ನೀಡಿ ವಿದ್ಯಾವಂತರನ್ನಾಗಿ ಮಾಡಿದುದರ ಅನನ್ಯ ಸೇವೆಯನ್ನು ಸ್ಮರಿಸುವ ಒಂದು ಸದಾವಕಾಶ ಎಂದು ಭಾವಿಸಿ ಭಾಗವಹಿಸುತ್ತಿರುವುದು ಪೂಜ್ಯರ ಮೇಲಿನ ಭಕ್ತಿಗೌರವದ ದ್ಯೋತಕ. ಬಂದವರೆಲ್ಲರೂ ಪೂಜ್ಯ ಶ್ರೀ ಶಿವಯೋಗಿಗಳವರ



ಪರಮಪೂಜ್ಯ ಶ್ರೀ ಶ್ರೀಗಳವರು ಶ್ರೀ ಅಮಿತ್ ಷಾ ಅವರಿಗೆ ವಿಭೂತಿಧಾರಣೆ ಮಾಡಿ ರುದ್ರಾಕ್ಷಿ ಮಾಲೆ ಹಾಕುತ್ತಿರುವುದು ಹಾಗೂ ಶ್ರೀ ಅಮಿತ್ ಷಾ ಅವರು ಲಿಂ. ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಪಾದುಕೆಗೆ ನಮಸ್ಕರಿಸುತ್ತಿರುವುದು

ಗದ್ದುಗೆಯ ದರ್ಶನ ಮಾಡಿ ಸಮಾರಂಭದಲ್ಲಿ ಭಾಗವಹಿಸಿ ನೆನಪಿನ ಬುತ್ತಿಯನ್ನು ಕಟ್ಟಿಕೊಂಡು ಹೋದರು.

ಜಯಂತ್ಯೋತ್ಸವದ ಅಂಗವಾಗಿ ಶ್ರೀ ಶಿವಯೋಗಿಗಳವರ ಗದ್ದುಗೆಗೆ ವಿಶೇಷವಾಗಿ ವಿವಿಧ ಪುಷ್ಪಗಳಿಂದ ಅಲಂಕಾರ ಮಾಡಲಾಗಿತ್ತು. ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ದಿನನಿತ್ಯದಂತೆ ಬೆಳಗಿನ ಜಾವ ೪ ಗಂಟೆಗೆ ಶಿವಪೂಜಾ ಯೋಗಾನುಷ್ಠಾನವನ್ನು ಮಾಡಿ ಶ್ರೀ ಶಿವಯೋಗಿಗಳ ಗದ್ದುಗೆಗೆ ಆಗಮಿಸಿ ವಿವಿಧ ಮಠಗಳ ಹರಗುರು ಚರಮೂರ್ತಿಗಳ ಸಮ್ಮುಖದಲ್ಲಿ ಪೂಜೆ ಸಲ್ಲಿಸಿ ಭಕ್ತಿಯನ್ನು ಸಮರ್ಪಿಸಿದರು. ಧಾರ್ಮಿಕ ವಿಧಿ ವಿಧಾನಗಳು ಪೂಜಾ ಕೈಂಕರ್ಯಗಳು, ರುದ್ರಾಭಿಷೇಕ, ಅಷ್ಟೋತ್ತರಗಳು, ಮಹಾಮಂಗಳಾರತಿ ಕಾರ್ಯಗಳು ನಡೆದವು. ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಗದ್ದುಗೆಗೆ ಆಗಮಿಸುವ ಮುನ್ನ ಶ್ರೀಕ್ಷೇತ್ರದ ಆರಾಧ್ಯದೈವ ಶ್ರೀ ಸಿದ್ಧಲಿಂಗೇಶ್ವರ ಹಾಗೂ ಶ್ರೀ ಉದ್ದಾನ ಶಿವಯೋಗಿಗಳ ಗದ್ದುಗೆ ಪೂಜೆ ಸಲ್ಲಿಸಿದರು. ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಗದ್ದುಗೆಗೆ ಆಗಮಿಸಿ ಪುಷ್ಪ ನಮನವನ್ನು ಸಲ್ಲಿಸುವುದರ ಮೂಲಕ ಭಕ್ತಿ ಗೌರವವನ್ನು ಸಲ್ಲಿಸಿದರು.

ಗದ್ದುಗೆಗೆ ಪೂಜೆ ಸಲ್ಲಿಸಿದ ನಂತರ ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಕಂಚಿನ ಪುತ್ಥಳಿಯನ್ನು ರುದ್ರಾಕ್ಷಿ ಮಂಟಪದಲ್ಲಿಟ್ಟು ಶ್ರೀ ಉದ್ದಾನ ಶಿವಯೋಗಿಗಳವರ ಗದ್ದುಗೆಯಿಂದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ನೇತೃತ್ವದಲ್ಲಿ ಹರಗುರು ಚರಮೂರ್ತಿಗಳು ಹಾಗೂ ಭಕ್ತರ ಸಮ್ಮುಖದಲ್ಲಿ ಮೆರವಣಿಗೆ ಮಾಡಲಾಯಿತು. ಲಿಂ. ಶ್ರೀ ಉದ್ದಾನ ಶಿವಯೋಗಿಗಳವರ ಗದ್ದುಗೆಯಿಂದ ಆರಂಭವಾದ ಮೆರವಣಿಗೆ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದ ಆವರಣದವರೆಗೆ ಸಾಗಿ ಮತ್ತೆ ಅದೇ ದಾರಿಯಲ್ಲಿ ಸಾಗಿ






ಕೇಂದ್ರ ಗೃಹಸಚಿವ ಶ್ರೀ ಅಮಿತ್ ಷಾ ಅವರು ಸಭಿಕರಿಗೆ ಶಿರಬಾಗಿ ವಂದಿಸುತ್ತಿರುವುದು

ಉದ್ದಾನ ಶಿವಯೋಗಿಗಳವರ ಗದ್ದುಗೆ ಬಳಿಗೆ ಮರಳಿತು.

ಮೆರವಣಿಗೆಯಲ್ಲಿ ನಂದಿಧ್ವಜ ಕುಣಿತ, ಪಟದ ಕುಣಿತ, ಡೊಳ್ಳು ಕುಣಿತವೂ ಸೇರಿದಂತೆ ವಿವಿಧ ಪ್ರಕಾರಗಳ ಜನಪದ ಕಲಾ ತಂಡಗಳು ಕಲಾಪ್ರದರ್ಶನದ ಮೂಲಕ ಮೆರವಣಿಗೆಯಲ್ಲಿ ಭಾಗವಹಿಸಿದ್ದವರ ಗಮನ ಸೆಳೆದವು. ಎಲ್ಲೆಲ್ಲೂ ನೋಡಿದರೂ ಹಬ್ಬದ ಸಡಗರದ ವಾತಾವರಣ, ಶ್ರೀ ಸಿದ್ಧಗಂಗಾ ಕ್ಷೇತ್ರವೂ ಸೇರಿದಂತೆ ಇಡೀ ತುಮಕೂರು ನಗರದ ರಸ್ತೆಗಳು ನವವಧುವಿನಂತೆ ಸಿಂಗಾರ



ಗೊಂಡಿದ್ದವು. ಎಲ್ಲಾ ಕಡೆ ಪೂಜ್ಯ ಶ್ರೀಗಳವರ ಭಾವಚಿತ್ರವುಳ್ಳ ಬೃಹತ್ ಫ್ಲೆಕ್ಸ್‌ಗಳು, ಕಟೌಟ್‌ಗಳು ರಾಜಾಜಿಸುತ್ತಿದ್ದವು.

ಸಮಾರಂಭದ ಕೇಂದ್ರ ಬಿಂದು ಕೇಂದ್ರ ಗೃಹ ಹಾಗೂ ಸಹಕಾರಿ ಸಚಿವರಾದ ಶ್ರೀ ಅಮಿತ್ ಷಾ ಅವರು ತುಮಕೂರಿನಲ್ಲಿ ವ್ಯವಸ್ಥೆ ಮಾಡಿದ್ದ ಹೆಲಿಪ್ಯಾಡ್‌ನಲ್ಲಿ ಬಂದಿಳಿದಾಗ ಅವರನ್ನು ಬಿಜೆಪಿ ಮುಖಂಡರು, ಗಣ್ಯರು ಪುಷ್ಪಗುಚ್ಛ ನೀಡಿ ಆತ್ಮೀಯವಾಗಿ ಬರಮಾಡಿ ಕೊಂಡರು. ಜನಪದ ಕಲಾ ತಂಡಗಳು ಹಾಗೂ ೧೧೫ ಕುಂಭಗಳನ್ನು ಹೊತ್ತ ಸುಮಂಗಲಿಯರು ಸ್ವಾಗತಿಸಿದರು. ತುಮಕೂರಿನಿಂದ ಶ್ರೀಮಠಕ್ಕೆ ಆಗಮಿಸಿದ ಶ್ರೀ ಅಮಿತ್ ಷಾ ಅವರು ನೇರವಾಗಿ ಲಿಂ. ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳವರ ಗದ್ದುಗೆಗೆ ತೆರಳಿದರು. ಅವರನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು, ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ, ಮಾಜಿ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪ, ಸ್ವಾಗತ ಸಮಿತಿ ಅಧ್ಯಕ್ಷ ಶ್ರೀ ಬಿ.ವೈ. ವಿಜಯೇಂದ್ರ, ಕೇಂದ್ರ ಸಚಿವರಾದ ಶ್ರೀ ಪ್ರಹ್ಲಾದ ಜೋಷಿ, ಶ್ರೀ ಎ. ನಾರಾಯಣಸ್ವಾಮಿ, ಶ್ರೀ ಭಗವಂತ ಖೂಬಾ






ಕೇಂದ್ರ ಗೃಹಸಚಿವ ಶ್ರೀ ಅಮಿತ್ ಷಾ ಅವರಿಂದ ಉದ್ಘಾಟನಾ ನುಡಿಗಳು

ಮೊದಲಾದ ಗಣ್ಯರು ಸ್ವಾಗತಿಸಿದರು. ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳವರು ಶ್ರೀ ಅಮಿತ್ ಷಾ ಅವರ ಹಣೆಗೆ ವಿಭೂತಿ ಧಾರಣೆ ಮಾಡಿ ಕೊರಳಿಗೆ ರುದ್ರಾಕ್ಷಿ ಮಾಲೆ ಹಾಕಿ ಸ್ವಾಗತಿಸಿದರು, ನಂತರ ಶ್ರೀ ಅಮಿತ್ ಷಾ ಅವರು ಗದ್ದುಗೆಗೆ ಪೂಜೆ ಸಲ್ಲಿಸಿ ಮಂಗಳಾರತಿ ಬೆಳಗಿ, ಪ್ರಾರ್ಥನೆ ಸಲ್ಲಿಸಿದರು.

ಸುಸಜ್ಜಿತವಾದ ಬೃಹತ್ ವೇದಿಕೆಯಲ್ಲಿ ೧೧೫ನೇ ಜಯಂತ್ಯೋತ್ಸವ ಪ್ರಾರ್ಥನೆಯೊಂದಿಗೆ ಲಕ್ಷಾಂತರ ಭಕ್ತರ ಸಮ್ಮುಖದಲ್ಲಿ ಪ್ರಾರಂಭವಾಯಿತು. ಸ್ವಾಗತ ಸಮಿತಿಯ ಅಧ್ಯಕ್ಷರು, ರಾಜ್ಯ ಬಿಜೆಪಿ ಉಪಾಧ್ಯಕ್ಷರೂ ಆದ ಶ್ರೀ ಬಿ.ವೈ. ವಿಜಯೇಂದ್ರ ಅವರು ಎಲ್ಲರನ್ನು ಸ್ವಾಗತಿಸುತ್ತಾ ಮಧ್ಯಾಹ್ನದ ಬಿಸಿಯೂಟದ ಯೋಜನೆ ಶಿವಕುಮಾರ ಸ್ವಾಮೀಜಿ ಅವರ ಹೆಸರಿಡಬೇಕೆಂದು ಮುಖ್ಯಮಂತ್ರಿಗಳಲ್ಲಿ ಮನವಿ ಮಾಡಿಕೊಂಡರು. ಆಧುನಿಕ ಬಸವಣ್ಣ ಎಂಬ ಹೆಗ್ಗಳಿಕೆಗೆ ಭಾಜನರಾದ ಪೂಜ್ಯ ಶ್ರೀಗಳ ಜನ್ಮದಿನ ಸಂಭ್ರಮ, ಸಡಗರದ ದಿನ. ಅವರ ಜನ್ಮದಿನವನ್ನು ಆಚರಿಸಲು ಹೆಮ್ಮೆಯಾಗುತ್ತದೆ. ಮಠವನ್ನು ಎಂಟು ದಶಕಗಳಿಗೂ ಹೆಚ್ಚು ಕಾಲ ಮುನ್ನಡೆಸಿದ್ದು ಅವರ ತಪಸ್ಸಿನ ದ್ಯೋತಕ. ಬಸವಾದಿ ಶರಣರ ಆಶಯದಂತೆ ಪೂಜ್ಯ ಶ್ರೀಗಳು ನಡೆದರು. ಲಕ್ಷಾಂತರ ಬಡವರ, ಅಕ್ಷರ ವಂಚಿತರ ಪಾಲಿಗೆ ಕಲ್ಪವೃಕ್ಷವಾಗಿದ್ದರು. ಊರೂರು ಸುತ್ತಿ ಭಿಕ್ಷಾಟನೆ ಮಾಡಿ, ಮಠ ಕಟ್ಟಿದ ಹೆಗ್ಗಳಿಕೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರದು. ಭಾರತೀಯ ಸಂಸ್ಕೃತಿಯ ಪರಂಪರೆ. ಗುರುಪರಂಪರೆ ಕಾಯಕೇ ಕೈಲಾಸ ಎಂದು ದಶಕಗಳ ಕಾಲ ಕ್ರಿಯಾಶೀಲರಾಗಿ, ಕಾರ್ಯತತ್ಪರರಾಗಿ ಸಮಾಜಮುಖಿ ಸೇವೆಯಲ್ಲಿ ತಮ್ಮನ್ನು ಅರ್ಪಿಸಿಕೊಂಡು ಮೇರು ಪರ್ವತವೇ ಆಗಿ ಉಳಿದರು. ಬಡವರ ಪಾಲಿಗೆ ಶಾಶ್ವತ ಬೆಳಕಾದರು. ರಾಜಕೀಯ, ಸಾಂಸ್ಕೃತಿಕ, ಧಾರ್ಮಿಕ ಕ್ಷೇತ್ರಗಳಲ್ಲಿ ಮಾರ್ಗದರ್ಶಕರಾಗಿದ್ದರು. ಜಾತಿ, ತಾರತಮ್ಯ ಮಾಡದೆ ಸೇವೆ ಸಲ್ಲಿಸಿದರು.

ಶ್ರೀ ಬಿ.ಎಸ್. ಯಡಿಯೂರಪ್ಪನವರು ೪ ಬಾರಿ ಮುಖ್ಯಮಂತ್ರಿಯಾಗಲು ಪೂಜ್ಯ ಶ್ರೀಗಳವರ ಆಶೀರ್ವಾದ, ಮಾರ್ಗದರ್ಶನವೇ ಕಾರಣ. ಧರ್ಮಕ್ಕಿಂತ ದಯೆ ದೊಡ್ಡದು. ಮಾನವ ಧರ್ಮಕ್ಕಿಂತ ಮಾನವೀಯತೆ ದೊಡ್ಡದು ಎಂಬ ತತ್ತ್ವದಲ್ಲಿ ನಂಬಿಕೆಯಿಟ್ಟು ಸೇವೆ ಮಾಡಿ ಹೆಜ್ಜೆ ಗುರುತುಗಳನ್ನು ಮೂಡಿಸಿದರು ಎಂದು ಹೇಳಿದರು.

ಶ್ರೀ ವಿಜಯೇಂದ್ರ ಅವರು ಕೇಂದ್ರ ಗೃಹ ಸಚಿವ ಶ್ರೀ ಅಮಿತ್ ಷಾ ಅವರ ದಕ್ಷತೆ, ಕ್ರಿಯಾಶೀಲತೆಯ ಬಗ್ಗೆ ಪ್ರಸ್ತಾಪಿಸಿ ಸರ್ದಾರ ವಲ್ಲಭಾಯಿ ಪಟೇಲರ ನಂತರ ದೇಶ ಕಂಡ ದಿಟ್ಟ ಗೃಹಮಂತ್ರಿಗಳಲ್ಲಿ ಶ್ರೀ ಅಮಿತ್ ಷಾ ಪ್ರಮುಖರು. ದೇಶವನ್ನು ಶಕ್ತ, ಸಮೃದ್ಧಿಗೊಳಿಸಬೇಕು ಎಂಬ ಮಹತ್ವಾಕಾಂಕ್ಷೆಯನ್ನಿಟ್ಟುಕೊಂಡು ಪ್ರಧಾನ ಮಂತ್ರಿಗಳಾದ ಶ್ರೀ ನರೇಂದ್ರ ಮೋದಿಯವರೊಂದಿಗೆ ದುಡಿಯುತ್ತಿದ್ದಾರೆ. ಇಂತಹ ಮಹಾನ್ ವ್ಯಕ್ತಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೫ನೇ ಜಯಂತ್ಯೋತ್ಸವದ ಉದ್ಘಾಟನೆಗೆ ಭಕ್ತರಾಗಿ ಬಂದಿರುವುದು ತಮಗೆ ಅತ್ಯಂತ ಸಂತೋಷ ತಂದಿದೆ ಎಂದು ಹೇಳಿದರು.

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ನೇತೃತ್ವದಲ್ಲಿ ಶ್ರೀ ಸುತ್ತೂರು ವೀರಸಿಂಹಾಸನ ಸಂಸ್ಥಾನ ಮಠದ ಪರಮಪೂಜ್ಯ ಜಗದ್ಗುರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಕೇಂದ್ರ ಗೃಹ ಹಾಗೂ ಸಹಕಾರ ಇಲಾಖೆ ಸಚಿವರಾದ ಶ್ರೀ ಅಮಿತ್ ಷಾ ಅವರು ಜ್ಯೋತಿ ಬೆಳಗಿಸಿ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಅವರು ತಮ್ಮ ಉದ್ಘಾಟನಾ ನುಡಿ ನಮನದಲ್ಲಿ "ನಾನು ಮೂರನೇ ಬಾರಿಗೆ ಶ್ರೀಮಠಕ್ಕೆ ಬರುತ್ತಿದ್ದೇನೆ. ಪ್ರತಿಸಾರಿ ಬಂದಾಗಲೂ ಮಾನವ ಜೀವನದ ಅತ್ಯಂತ ಉತ್ಕೃಷ್ಟ ಆದರ್ಶಗಳನ್ನು ಕಲಿತುಕೊಂಡು ಹೋಗುತ್ತಿದ್ದೇನೆ. ಇಡೀ ದೇಶದಲ್ಲಿ ರಾಮ, ಕೃಷ್ಣ ಮತ್ತು ಇತರ ಸ್ವಾಮೀಜಿಗಳ ಹೆಸರಿನ ಅನೇಕ ಮಠಗಳು ಸ್ಥಾಪನೆಯಾಗಿವೆ. ಆದರೆ ಎಲ್ಲ ಮಠಗಳಿಗಿಂತ ಸಿದ್ಧಗಂಗಾ ಮಠ ನಿಸ್ವಾರ್ಥ ಕಾರ್ಯ ಮಾಡುತ್ತಿದೆ" ಎಂದು ಬಣ್ಣಿಸಿದರು.

ಅವರು ತಮ್ಮ ಭಾಷಣದಲ್ಲಿ "ಶ್ರೀ ಶಿವಕುಮಾರ ಶ್ರೀಗಳು ಶಿಕ್ಷಣ, ಅನ್ನದಾಸೋಹ ಎರಡನ್ನೂ ಏಕಕಾಲದಲ್ಲಿ ನೀಡುತ್ತಾ ಲಕ್ಷಾಂತರ ಬಡ ಮಕ್ಕಳಿಗೆ ಭವಿಷ್ಯದ ಬದುಕು ಕಟ್ಟಿಕೊಟ್ಟಿದ್ದಾರೆ. ಶ್ರೀಗಳು ತೋರಿಸಿರುವ ಸನ್ಮಾರ್ಗ ಇಂದು ನಮ್ಮೆಲ್ಲರಿಗೂ ಅನುಕರಣೀಯ. ಮನುಷ್ಯ ಹೇಗೆ ಬದುಕಬೇಕು, ಆದರ್ಶ ಜೀವನ ಹೇಗೆ ನಡೆಸಬೇಕು ಎಂಬುದನ್ನು ಶ್ರೀಗಳ ತಮ್ಮ ಕಾಯಕ ತತ್ತ್ವದ ಮೂಲಕ ಇಡೀ ಸಮಾಜಕ್ಕೆ ತೋರಿಸಿಕೊಟ್ಟಿದ್ದಾರೆ. ಈ ಹಿಂದೆ ಶ್ರೀ ಅಟಲ್ ಬಿಹಾರಿ ವಾಜಪೇಯಿಯವರು ಶ್ರೀ ಮಠಕ್ಕೆ ಭೇಟಿ ನೀಡಿದಾಗ ಉತ್ತರದಲ್ಲಿ ಗಂಗೆ, ದಕ್ಷಿಣದಲ್ಲಿ ಸಿದ್ಧಗಂಗೆ ಇದೆ ಎಂದು ಹೇಳಿದ್ದರು. ಇದರರ್ಥ ಗಂಗಾ ನದಿಯಲ್ಲಿ ಸ್ನಾನ ಮಾಡಿದರೆ ಜನ್ಮ ಜನ್ಮದ ಪಾಪ ನಾಶವಾಗುತ್ತದೆ. ಶಿಕ್ಷಣ ಸನ್ಮಾರ್ಗ ತೋರುತ್ತಿರುವ ಸಿದ್ಧಗಂಗಾ ಮಠಕ್ಕೆ ಒಮ್ಮೆ ಭೇಟಿ ನೀಡಿದರೆ ಪುಣ್ಯಬರುತ್ತದೆ. ಇಂತಹ ಮಹಾನ್ ತಪಸ್ವಿ ಮಠದಲ್ಲಿರುವ ಮಕ್ಕಳಿಗೆ ಶಿಕ್ಷಣ, ಅನ್ನದಾಸೋಹ ನೀಡುವುದರ ಮೂಲಕ ಬಸವಣ್ಣನವರ ಆದರ್ಶಗಳನ್ನು ಚಾಚೂ ತಪ್ಪದೆ ಪಾಲಿಸುತ್ತಿದ್ದರು. ಅವರನ್ನು 'ಆಧುನಿಕ ಬಸವಣ್ಣ' ಎಂದು ಬಣ್ಣಿಸಿದರು. ಬಸವಣ್ಣನ ವಚನಗಳು ಮಾದರಿ ಆಗಿರುವಂತೆ ದೇಶಕ್ಕೆ ಸ್ವಾಮೀಜಿ ಅವರು ಮಾದರಿಯಾಗಿದ್ದಾರೆ. ತ್ರಿವಿಧ ದಾಸೋಹ, ಕಾಯಕದ ಮೂಲಕ ಎಲ್ಲರ ಮನ



ಕೇಂದ್ರ ಗೃಹಸಚಿವ ಶ್ರೀ ಅಮಿತ್ ಷಾ ಅವರು ಕಾಮಾಧೇನು





ಕೇಂದ್ರ ಗೃಹಸಚಿವ ಶ್ರೀ ಅಮಿತ್ ಷಾ ಅವರು ಸುತ್ತೂರು ಜ॥ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ಹಾಗೂ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರೊಂದಿಗೆ ಸಮಾಲೋಚನೆ ನಡೆಸುತ್ತಿರುವುದು

ಗೆದ್ದಿದ್ದಾರೆ. ಸಿದ್ಧಗಂಗಾ ಮಠ ಹೆಸರಿಗೆ ತಕ್ಕಂತೆ ಸಿದ್ಧಾಂತದ ಮಠವಾಗಿದೆ" ಎಂದು ಹೇಳಿದರು.

"೮೮ ವರ್ಷಗಳ ಕಾಲ ಶ್ರೀಗಳು ಸುದೀರ್ಘ, ನಿಸ್ವಾರ್ಥ ಸೇವೆ ಸಲ್ಲಿಸುವ ಮೂಲಕ ಸಮಾಜಕ್ಕೆ ಸನ್ಮಾರ್ಗ ತೋರಿಸಿದ್ದಾರೆ. ಶ್ರೀಗಳವರ ಸನ್ನಡತೆ, ಕಾಯಕ ತತ್ತ್ವವನ್ನು ನಾವೆಲ್ಲರೂ ಅನುಕರಣೆ ಮಾಡಬೇಕಾಗಿರುವುದು ನಮ್ಮೆಲ್ಲರ ಆದ್ಯ ಕರ್ತವ್ಯವಾಗಬೇಕು. ಶ್ರೀಮಠದ ಕಿರಿಯ ಸ್ವಾಮಿಗಳು ಶ್ರೀ ಶಿವಕುಮಾರ ಸ್ವಾಮೀಜಿಯವರ ಆದರ್ಶಗಳನ್ನು ಮುಂದುವರಿಸಿಕೊಂಡು ಬರುತ್ತಿದ್ದಾರೆ" ಎಂದು ಹೇಳಿದರು.

ಪ್ರಧಾನಿ ಶ್ರೀ ಮೋದಿಯವರಿಂದ ಶ್ರೀಗಳವರ ತತ್ತ್ವಪಾಲನೆ : "ಕೊರೋನಾ ಸಂಕಷ್ಟ ಕಾಲದಲ್ಲಿ ದೇಶದ ೮೦ ಕೋಟಿ ಬಡ ಜನರಿಗೆ ಉಚಿತವಾಗಿ ಊಟ, ೩ ಕೋಟಿ ಜನರಿಗೆ ಮನೆಯನ್ನು ನಿರ್ಮಿಸಿ ಕೊಡುವ ಮೂಲಕ ಪ್ರಧಾನಿ ಶ್ರೀ ಮೋದಿ ಅವರು ಸಿದ್ಧಗಂಗಾ ಶ್ರೀಗಳವರ ಕಾಯಕ ತತ್ತ್ವದ ಆದರ್ಶವನ್ನು ಪಾಲನೆ ಮಾಡುತ್ತಿದ್ದಾರೆ" ಎಂದು ಪ್ರಶಂಸಿಸಿದರು.

**ಶ್ರೀ ಬಿ.ವೈ. ವಿಜಯೇಂದ್ರ ಸಂಘಟನಾ ಶಕ್ತಿಗೆ ಮೆಚ್ಚುಗೆ**

ಪರಮಪೂಜ್ಯರ ೧೧೫ನೇ ಜಯಂತ್ಯೋತ್ಸವ ಅದ್ದೂರಿಯಾಗಿ ಸುವ್ಯವಸ್ಥಿತವಾಗಿ, ಸಮಾರಂಭ

## ಪ್ರಧಾನಮಂತ್ರಿ ಶ್ರೀ ಮೋದಿಯವರಿಂದ ನುಡಿನಮನ



ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೫ನೇ ಜಯಂತಿ ಪ್ರಯುಕ್ತ ಪ್ರಧಾನಮಂತ್ರಿ ಶ್ರೀ ನರೇಂದ್ರ ಮೋದಿಯವರು ಟ್ವೀಟ್ ಮೂಲಕ ಭಕ್ತಿ ಗೌರವವನ್ನು ಅರ್ಪಿಸಿದ್ದಾರೆ. ಅವರು "ಪೂಜ್ಯನೀಯರಾದ, ಗೌರವಾನ್ವಿತ ಶ್ರೀ ಶಿವಕುಮಾರ ಸ್ವಾಮೀಜಿಯವರ ಜಯಂತಿಯಂದು ನಾನು ನನ್ನ ಗೌರವ ನಮನ ಸಲ್ಲಿಸುವೆ. ಸ್ವಾಮೀಜಿಯವರು ಅಸಂಖ್ಯಾತ ಜನರ ಹೃದಯದಲ್ಲಿ ಅಮರರಾಗಿದ್ದಾರೆ. ಆರೋಗ್ಯ ಮತ್ತು ಶಿಕ್ಷಣಕ್ಕೆ ನೀಡಿದ ಪ್ರಾಮುಖ್ಯ ಹಾಗೂ ಸರಿಸಾಟಿಯುಲ್ಲದ ಸಾಮುದಾಯಿಕ ಸೇವೆಯಿಂದಾಗಿ ಅವರು ಸದಾಸ್ಮರಣೀಯರು. ಅವರ ಕನಸುಗಳನ್ನು ಈಡೇರಿಸಲು ನಾವು ಶ್ರಮಿಸೋಣ" ಎಂದು ಹೇಳಿದ್ದಾರೆ.






ಕಲ್ಲಿದ್ದಲು, ಗಣಿ ಮತ್ತು ಸಂಸದೀಯ ವ್ಯವಹಾರಗಳ ಕೇಂದ್ರ ಸಚಿವರಾದ ಶ್ರೀ ಪ್ರಹ್ಲಾದ ಜೋಷಿ ಅವರು ಶ್ರೀ ಸಿದ್ಧಗಂಗಾ ಫಾರ್ಮಸಿ ಕಾಲೇಜು ಕಟ್ಟಡದ ಶಿಲಾನ್ಯಾಸವನ್ನು ನೇರವೇರಿಸುತ್ತಿರುವುದು.

ಹೇಗಿರಬೇಕು ಎಂಬುದಕ್ಕೆ ನಿದರ್ಶನವಾಗಿ ನಡೆದ ಸಮಾರಂಭದ ರೂವಾರಿ ಸ್ವಾಗತ ಸಮಿತಿಯ ಅಧ್ಯಕ್ಷರು ಹಾಗೂ ಬಿಜೆಪಿ ರಾಜ್ಯ ಘಟಕದ ಉಪಾಧ್ಯಕ್ಷರೂ ಆದ ಶ್ರೀ ಬಿ.ವೈ. ವಿಜಯೇಂದ್ರ ಅವರ ಕಾರ್ಯ ಸಾಧನೆಗೆ ಶ್ರೀ ಅಮಿತ್ ಷಾ ಅವರು ಮೆಚ್ಚುಗೆ ವ್ಯಕ್ತಪಡಿಸಿದರು. ಅವರು ಶ್ರೀ ಬಿ.ವೈ. ವಿಜಯೇಂದ್ರ ಮತ್ತು ಶ್ರೀ ಬಿ.ಎಸ್. ಯಡಿಯೂರಪ್ಪ ಅವರ ಹೆಸರು ಪ್ರಸ್ತಾಪಿಸಿದಾಗ ಪ್ರೇಕ್ಷಕರಿಂದ ಜಯಘೋಷ ಮೊಳಗಿತು.

ನುಡಿನಮನ ಸಲ್ಲಿಸಿದ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ ಅವರು "ಶ್ರದ್ಧೆ, ನಿಷ್ಠೆ, ಪರಿಶ್ರಮ ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ಧ್ಯೇಯವಾಗಿತ್ತು. ನಾವೆಲ್ಲರೂ ಈ ಮೂರು ತತ್ತ್ವಗಳನ್ನು ಪರಿಪಾಲನೆ ಮಾಡಬೇಕು. ಜಾತಿ, ಕುಲ, ಧರ್ಮವನ್ನು ಮೀರಿ ಬದುಕಿ ತೋರಿಸಿ ಕೊಟ್ಟಿದ್ದಾರೆ. ಎಲ್ಲಾ ಸಮುದಾಯದ ಜನರನ್ನು ಪ್ರೀತಿಸುತ್ತಿದ್ದರು. ಹಾಗಾಗಿಯೇ ಇಂದು ಸರ್ವೋದಯ ಎಂಬ ಪರಿಕಲ್ಪನೆ ಶ್ರೀಮಠದಲ್ಲಿ ನಿತ್ಯ ನಿರಂತರವಾಗಿದೆ. ಒಂದು ಸರ್ವೋದಯ ಮತ್ತೊಂದು ಅಂತ್ಯೋದಯ ಮಠದಲ್ಲಿ ಸದಾ ಚಾಲ್ತಿಯಲ್ಲಿದೆ. ಕಟ್ಟಕಡೆಯ ವ್ಯಕ್ತಿಗೂ ಮಠದಲ್ಲಿ ಅವಕಾಶವಿದೆ. ಇದು ಕರ್ನಾಟಕದಲ್ಲಿ ನಿರಂತರವಾಗಿರಲಿ. ಪೂಜ್ಯರು ನಿರ್ಗತಿಕರಿಗೆ ಆಶ್ರಯ ತಾಣವಾಗಿದ್ದರು" ಎಂದು ಹೇಳಿದರು.


ಕೇಂದ್ರ ಸಚಿವರಾದ ಶ್ರೀ ಪ್ರಹ್ಲಾದ ಜೋಷಿ ಅವರಿಂದ ನುಡಿನಮನ

ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಶ್ರೀ ಪ್ರಹ್ಲಾದ ಜೋಷಿ ಅವರಿಗೆ ಸ್ಮರಣಿಕೆ ನೀಡಿ [illegible]ಸುತ್ತಿರುವುದು






ಕೇಂದ್ರ ರಾಜ್ಯ ಸಚಿವರಾದ ಶ್ರೀ ಭಗವಂತ ಖೂಬಾ ಅವರಿಂದ ನುಡಿನಮನ

ಶ್ರೀ ಭಗವಂತ ಖೂಬಾ ಅವರಿಗೆ ಪರಮಪೂಜ್ಯ ಶ್ರೀ ಶ್ರೀ ಗಳವರಿಂದ ಆಶೀರ್ವಾದ

ಅವರು ತಮ್ಮ ಮಾತುಗಳನ್ನು ಮುಂದುವರಿಸಿ "ರಾಜ್ಯದ ಸರ್ಕಾರಿ ಶಾಲೆಗಳಲ್ಲಿ ಮಧ್ಯಾಹ್ನದ ವೇಳೆ ನಡೆಯುತ್ತಿರುವ ಬಿಸಿಯೂಟಕ್ಕೆ ತ್ರಿವಿಧ ದಾಸೋಹಿ ಲಿಂ. ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ಹೆಸರಿಡಲು ಸರ್ಕಾರ ಬದ್ಧವಾಗಿದೆ. ಸರ್ಕಾರ ಶ್ರದ್ಧಾಭಕ್ತಿಯಿಂದ ಮಠದ ಮಾರ್ಗದರ್ಶನದಲ್ಲಿ ನಡೆಯುತ್ತಿದ್ದು, ಶಿಕ್ಷಣ ಹಾಗೂ ಆರೋಗ್ಯ ಕ್ಷೇತ್ರಕ್ಕೆ ಹೆಚ್ಚು ಒತ್ತು ನೀಡಲಾಗುತ್ತಿದೆ. ಶ್ರೀಗಳವರ ೧೧೫ನೇ ಜಯಂತಿ ಮತ್ತು ಗುರುವಂದನಾ ಕಾರ್ಯಕ್ರಮದಲ್ಲಿ ಒಬ್ಬ ಭಕ್ತನಾಗಿ ಭಾಗವಹಿಸುತ್ತಿರುವುದು ನನ್ನ ಪುಣ್ಯಭಾಗ್ಯ. ಈ ನೆಲದಲ್ಲಿ ಸ್ಫೂರ್ತಿ, ಶಾಂತಿ ಇದೆ. ೮೮ ವರ್ಷಗಳ ಕಾಲ ನಾಡಿನ ಸೇವೆಯನ್ನು ಮಠದ ಮೂಲಕ ಶ್ರೀಗಳು ಮಾಡಿದ್ದಾರೆ. ಯಾವ ಮಠಾಧೀಶರು ಇಷ್ಟೊಂದು ಸುದೀರ್ಘಕಾಲ ಸೇವೆ ಮಾಡಿಲ್ಲ. ಅಶಕ್ತರಿಗೆ ಅನ್ನ, ಅಕ್ಷರ, ಆಶ್ರಯ ನೀಡುವ ಕಾರ್ಯಕ್ರಮವನ್ನು ಹಮ್ಮಿಕೊಂಡು ಅದನ್ನು ನಿರಂತರವಾಗಿ ಪಾಲಿಸಿ ಕೊಂಡು ಬಂದಿದ್ದರು. ಶ್ರೀಗಳವರು ಇಂದು ನಮ್ಮೊಂದಿಗೆ ಭೌತಿಕವಾಗಿ ಇಲ್ಲದಿದ್ದರೂ ಮಾನಸಿಕವಾಗಿ ಜೀವಂತ ವಾಗಿದ್ದಾರೆ. ಸದಾ ನಮಗೆ ಆಶೀರ್ವಾದ ನೀಡುತ್ತಿದ್ದಾರೆ. ಸಾಧಕನಿಗೆ ಸಾವು ಅಂತ್ಯವಲ್ಲ. ಸಾವಿನ



ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ ಅವರಿಂದ ನುಡಿನಮನ



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ನುಡಿನಮನ

ನಂತರವೂ ಬದುಕುವುದು ಸಾಧಕ" ಎಂದು ಸ್ವಾಮಿ ವಿವೇಕಾನಂದರು ಹೇಳಿದ ಮಾತನ್ನು ಉಲ್ಲೇಖಿಸಿದರು.

"ಪೂಜ್ಯ ಶ್ರೀಗಳವರ ಹೆಸರೇ ಒಂದು ದೈವಶಕ್ತಿ. ಈ ದೈವಶಕ್ತಿ ಇಂದು ನಮ್ಮೆಲ್ಲರಿಗೂ ಮಾರ್ಗದರ್ಶನ ಮಾಡುತ್ತಿದೆ" ಎಂದು ಹೇಳಿದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ನಿಕಟಪೂರ್ವ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ಮಾತನಾಡಿ "ಲಿಂಗೈಕ್ಯ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಜೀವನ ಚರಿತ್ರೆಯನ್ನು ಪಠ್ಯಪುಸ್ತಕದಲ್ಲಿ ಅಳವಡಿಸುವಂತೆ ರಾಜ್ಯ ಸರ್ಕಾರಕ್ಕೆ ಮನವಿ ಮಾಡಿದರು.

"ಪರಮಪೂಜ್ಯ ಶ್ರೀಗಳವರು ಭಕ್ತಿ, ವಿರಕ್ತ, ವಿದ್ವತ್, ವಿನಯ, ಶಿಕ್ಷಣ, ಸ್ಥಿತಪ್ರಜ್ಞೆ, ದಾಸೋಹ ಗುಣಗಳ ಪ್ರತೀಕವಾಗಿದ್ದರು. ಜಾತಿ, ವರ್ಗ ಭೇದವಿಲ್ಲದೆ ಎಲ್ಲರನ್ನು ತಮ್ಮವರಂತೆ ಭಾವಿಸಿದ್ದರು. ಸಮಸ್ಯೆ ಇದ್ದಾಗ ಮಾರ್ಗದರ್ಶನ ಪಡೆಯಲು ಬರುತ್ತಿದ್ದೆ. ಇಳಿ ವಯಸ್ಸಿನಲ್ಲಿ ಆರೋಗ್ಯದ ದೃಷ್ಟಿಯಿಂದ ಹೊರಗಡೆ ಪಾದಪೂಜೆಗೆ ಹೋಗದಂತೆ ಕೇಳಿಕೊಂಡಿದ್ದೆ. ನಿಮ್ಮ ಮಾತನ್ನು ಒಪ್ಪುತ್ತೇನೆ. ಆದರೆ ಮಠ ನಡೆಸಬೇಕಾದರೆ ಇದು ಅನಿವಾರ್ಯ. ಪಾದಪೂಜೆಗೆ ಹೋದರೆ ಭಕ್ತರು ಹಣಕಾಸಿನ ನೆರವು ನೀಡುತ್ತಾರೆ. ಆ ಹಣ ತಂದು ಮಕ್ಕಳಿಗೆ ಊಟ ನೀಡಬೇಕಾಗಿದೆ ಎಂದು ದಾಸೋಹದ ಕಾಯಕವನ್ನು ನೆನಪಿಸುತ್ತಿದ್ದರು ಎಂದು ಹೇಳಿದರು. ಅನ್ನದಾನ, ಜ್ಞಾನದಾನ, ಅಭಯ ದಾನವನ್ನು ಸೃಷ್ಟಿಸಿ ಪೂಜ್ಯ ಶ್ರೀಗಳವರು ಸಮಾಜಕ್ಕೆ ಸಂದೇಶ ನೀಡುತ್ತಿದ್ದರು. ಶ್ರೀಗಳವರು ಹಾಕಿಕೊಟ್ಟ ಮಾರ್ಗದರ್ಶನದಲ್ಲಿ ನಾವೆಲ್ಲರೂ ನಡೆಯೋಣ" ಎಂದು ಹೇಳಿದರು.

ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ತತ್ತ್ವ ಸಿದ್ಧಾಂತಗಳಿಗೆ ಕಿಂಚಿತ್ತು ಲೋಪ ಬಾರದಂತೆ ಇಂದಿನ ಮಠಾಧ್ಯಕ್ಷರಾದ ಶ್ರೀ ಸಿದ್ಧಲಿಂಗ ಸ್ವಾಮಿಗಳು ಮಠವನ್ನು ಮುನ್ನಡೆಸುತ್ತಿದ್ದಾರೆ ಎಂದು ಶ್ಲಾಘಿಸಿದರು. ಬಡವರು, ದೀನ ದಲಿತರ ಬಾಳಿನಲ್ಲಿ ಬೆಳಕಾಗಿರುವ ಪೂಜ್ಯ ಶ್ರೀಗಳವರ ೧೧೫ನೇ ಜಯಂತ್ಯೋತ್ಸವದಲ್ಲಿ ಕೇಂದ್ರ ಗೃಹ ಹಾಗೂ ಸಹಕಾರ ಸಚಿವರಾದ ಶ್ರೀ ಅಮಿತ್ ಷಾ ಅವರು ಭಾಗಿರುವುದು ತಮಗೆ ಸಂತಸ ತಂದಿದ್ದು ಅವರಿಗೆ ಧನ್ಯವಾದಗಳನ್ನು ಸಲ್ಲಿಸುವುದಾಗಿ ಹೇಳಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀಮಠ ಹಾಗೂ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ ಗೌರವವನ್ನಿಟ್ಟುಕೊಂಡಿರುವ ಮಾಜಿ ಉಪ ಮುಖ್ಯಮಂತ್ರಿಗಳು, ಕಾಂಗ್ರೆಸ್ ಮುಖಂಡರು, ಶಾಸಕರೂ ಆದ ಡಾ. ಜಿ. ಪರಮೇಶ್ವರ್ ಅವರು ತಮ್ಮ ನುಡಿನಮನದಲ್ಲಿ "ಭಾರತ ಅನೇಕ ಮಹಾಪುರುಷರನ್ನು ಕಂಡಿದೆ. ಅಣ್ಣ ಬಸವಣ್ಣನವರು ಈ ನಾಡಿನಲ್ಲಿ ಹುಟ್ಟಿ ಇಡೀ ವಿಶ್ವಕ್ಕೆ ಸಮಾನತೆಯನ್ನು ಬೋಧಿಸಿ ಹೋಗಿದ್ದಾರೆ. ನಾನು ಮತ್ತು ಡಾ. ನೀರಜ್ ಪಾಟೀಲ್ ಅವರು ಲಂಡನ್ ಥೇಮ್ಸ್ ನದಿಯ ದಡದಲ್ಲಿ ಬಸವಣ್ಣನವರ ಪ್ರತಿಮೆ ನಿರ್ಮಾಣ ಮಾಡಿದ್ದೇವೆ. ಈ ಪ್ರತಿಮೆ ನಿರ್ಮಾಣವಾಗಲು ಶ್ರೀ ಬಿ.ಎಸ್. ಯಡಿಯೂರಪ್ಪ ಅವರ ನೆರವು ಹಾಗೂ ಸಹಕಾರವನ್ನು



ಶ್ರೀಮಠದ ಸದ್ಭಕ್ತರು ಹಾಗೂ ಮಾಜಿ ಮುಖ್ಯಮಂತ್ರಿಗಳು ಆದ ಶ್ರೀ ಬಿ.ಎಸ್. ಯಡಿಯೂರಪ್ಪ ಅವರಿಂದ ನುಡಿನಮನ

ಮುಕ್ತ ಕಂಠದಿಂದ ಶ್ಲಾಘಿಸಿದರು. ಇಂದು ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ನಮ್ಮೊಂದಿಗೆ ಇಲ್ಲದಿರಬಹುದು. ಆದರೆ ಅವರು ಸದಾ ನಮ್ಮ ಆತ್ಮದಲ್ಲಿದ್ದಾರೆ. ಮಕ್ಕಳಿಗೆ ಶಿಕ್ಷಣ ಕೊಡಬೇಕು. ಅದರಲ್ಲೂ ಗ್ರಾಮೀಣ ಬಡ ಮಕ್ಕಳಿಗೆ ಶಿಕ್ಷಣ ನೀಡಬೇಕು, ಆಶ್ರಯ ನೀಡಬೇಕು. ಮಕ್ಕಳಿಗೆ ಪ್ರಶ್ನೆ ಮಾಡುವುದನ್ನು ಕಲಿಸಬೇಕೆಂದು ಹೇಳುತ್ತಿದ್ದರು" ಎಂದು ಹೇಳಿದರು.

'ಸಮಾನತೆ, ಭ್ರಾತೃತ್ವ ಪ್ರತಿಪಾದನೆ ಮಾಡಿದ ಸಿದ್ಧಗಂಗಾ ಮಠ ಶ್ರೀಗಳ ಆಶಯದಂತೆ ಇಡೀ ಭಾರತ ಬಸವ ಭಾರತ ಆಗಬೇಕು. ಪ್ರಜಾಪ್ರಭುತ್ವದ ಮಾದರಿ ತೋರಿಸಿ ಕೊಟ್ಟ ಹೆಗ್ಗಳಿಕೆ ೧೨ನೇ ಶತಮಾನದ ಬಸವ ಪರಂಪರೆಯದ್ದು. ಆ ಆಶಯವನ್ನು ಸಂವಿಧಾನದಲ್ಲಿ ಅಳವಡಿಸಿಕೊಂಡಿರುವುದು ಗಮನಾರ್ಹ. ಬ್ರಿಟಿಷ್ ಪಾರ್ಲಿಮೆಂಟ್‌ಗೂ ಮುನ್ನ ೧೨ನೇ ಶತಮಾನದಲ್ಲಿ ಶರಣರ ಸಂಸತ್ ನಮ್ಮ ರಾಜ್ಯದಲ್ಲಿತ್ತು ಎಂಬುದನ್ನು ಇತಿಹಾಸದ ಮೂಲಕ ಅರಿತುಕೊಂಡಿದ್ದೇವೆ ಎಂದು ಹೇಳಿದ ಡಾ. ಪರಮೇಶ್ವರ್ ಅವರು ನಮ್ಮ ಇಡೀ ವಂಶ, ಕುಟುಂಬ ಸಿದ್ಧಗಂಗಾ ಮಠಕ್ಕೆ, ಶ್ರೀಗಳಿಗೆ ನಡೆದು ಕೊಂಡು ಬಂದಿದೆ" ಎಂದು ತಮ್ಮ ಮನದಾಳದ ಮಾತುಗಳನ್ನು ಹಂಚಿಕೊಂಡರು.



ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರಿಂದ ಆಶೀರ್ವಚನ

**ಶ್ರೀ ಸಿದ್ಧಗಂಗಾ ಫಾರ್ಮಸಿ ಕಾಲೇಜು ಕಟ್ಟಡದ ಶಿಲಾನ್ಯಾಸವನ್ನು** ನೆರವೇರಿಸಿದ ಕೇಂದ್ರ ಸರ್ಕಾರದ ಕಲ್ಲಿದ್ದಲು, ಗಣಿ ಮತ್ತು ಸಂಸದೀಯ ವ್ಯವಹಾರಗಳ ಸಚಿವರಾದ ಶ್ರೀ ಪ್ರಹ್ಲಾದ ಜೋಷಿಯವರು ಮಾತನಾಡಿ "ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರು ಜಗತ್ತು ಕಂಡ ಅಚ್ಚರಿ ಎಂದು ಬಣ್ಣಿಸಿದ ಅವರು ಮಹಾನ್ ಜ್ಞಾನಿಯಾದಂತಹ ಪೂಜ್ಯ ಶ್ರೀಗಳವರು ೮ ದಶಕಗಳಕಾಲ ಶ್ರೀ ಸಿದ್ಧಗಂಗಾ ಮಠದಲ್ಲಿ ದೇವರ ರೂಪದಲ್ಲಿದ್ದು ಅವರು ಶೂನ್ಯದಿಂದ ಭವ್ಯವಾದ, ದಿವ್ಯವಾದ ಸೃಷ್ಟಿಯನ್ನು ನಿರ್ಮಾಣ ಮಾಡಿದ್ದಾರೆ. ಶ್ರೀಮಠದ ಅನ್ನ, ಅಕ್ಷರ, ಆಶ್ರಯದ ಪ್ರೇರಣೆಯಿಂದ ಆಹಾರ ಭದ್ರತೆ ಕಾರ್ಯಕ್ರಮವನ್ನು ಜಾರಿಗೊಳಿಸುವ ಮೂಲಕ ಕೇಂದ್ರ ಸರ್ಕಾರ ಕಳೆದ ೨ ವರ್ಷಗಳಲ್ಲಿ ಕೋವಿಡ್ ಸಂದರ್ಭದಲ್ಲಿ ೮೦ ಕೋಟಿ ಜನರಿಗೆ ಆಹಾರ ಭದ್ರತೆಯನ್ನು ಒದಗಿಸಿದೆ" ಎಂದರು.

ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿ ಅವರೊಂದಿಗೆ ಡಾ. ಜಿ. ಪರಮೇಶ್ವರ್, ಕೇಂದ್ರ ರಾಜ್ಯ ಸಚಿವ ಶ್ರೀ ಎ. ನಾರಾಯಣಸ್ವಾಮಿ ಹಾಗೂ ಸಚಿವರಾದ ಶ್ರೀ ಜೆ.ಸಿ. ಮಾಧುಸ್ವಾಮಿಯವರು

ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಕೇಂದ್ರ ರಾಸಾಯನಿಕ ಮತ್ತು ಗೊಬ್ಬರ ಹಾಗೂ ನವೀಕರಿಸ ಬಹುದಾದ ಇಂಧನ ಖಾತೆ ರಾಜ್ಯ ಸಚಿವರಾದ ಶ್ರೀ ಭಗವಂತ ಖೂಬಾರವರು ಮಾತನಾಡಿ "ಸಿದ್ಧಗಂಗೆ ವಿಜ್ಞಾನ, ಆಶ್ರಯ ಮತ್ತು ದಾಸೋಹದ ಗಂಗೆ ಎನಿಸಿದೆ" ಎಂದು ಪ್ರಶಂಸಿಸಿದರು.

ಸಮಾರಂಭದ ದಿವ್ಯ ನೇತೃತ್ವ ವಹಿಸಿದ್ದ ಶ್ರೀಮನ್ನಿರಂಜನ ಪ್ರಣವಸ್ವರೂಪಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಮಂಗಳ ನುಡಿಗಳಲ್ಲಿ "ಪರಮಪೂಜ್ಯ ಶಿವಕುಮಾರ ಮಹಾಸ್ವಾಮೀಜಿ ಯವರು ಹಾಕಿಕೊಟ್ಟ ಮಾರ್ಗದಲ್ಲಿ ನಾವೆಲ್ಲ ಮುನ್ನಡೆಯುವುದೇ ನಾವು ಅವರಿಗೆ ಸಲ್ಲಿಸುವ ನಿಜವಾದ ಗೌರವ. ಮಠದ ನಿರಂತರ ದಾಸೋಹವೇ ಸರ್ಕಾರ ಆರಂಭಿಸಿದ ಬಿಸಿಯೂಟ ಯೋಜನೆಗೆ ಪ್ರೇರಣೆಯಾಗಿತ್ತು. ಹಾಗಾಗಿ ಯೋಜನೆಗೆ ಪ್ರತ್ಯೇಕವಾಗಿ ಶ್ರೀಗಳವರ ಹೆಸರಿಡುವ ಅಗತ್ಯವಿಲ್ಲ" ಎಂದು ಹೇಳಿದರು.

"ನಿರಂತರವಾಗಿ ೮೮ ವರ್ಷಗಳ ಕಾಲ ಕಾಯಾ, ವಾಚಾ, ಮನಸಾ ಸಿದ್ಧಗಂಗಾ ಮಠ ಸಮಾಜದ ಅಭಿವೃದ್ಧಿಯಲ್ಲಿ ಪೂಜ್ಯ ಶ್ರೀಗಳು ತೊಡಗಿಸಿಕೊಂಡಿದ್ದು ಒಂದು ಐತಿಹಾಸಿಕ ದಾಖಲೆ. ಇಂದಿನ ಸಮಾರಂಭ ಶ್ರೀಗಳವರ ಜಯಂತ್ಯೋತ್ಸವ ಭಕ್ತಿಯ ಸಂಗಮ. ಶ್ರೀಗಳಿಗೆ ಭಕ್ತಿಯ ಕಾಣಿಕೆ ಅರ್ಪಿಸುವ ಕಾರ್ಯಕ್ರಮ. ದಿನನಿತ್ಯ ಪೂಜ್ಯರ ದರ್ಶನ ಭಾಗ್ಯ ಪಡೆದಿದ್ದ ನಾವು ಪುಣ್ಯವಂತರು. ಅವರನ್ನು ನೆನೆಯದ ದಿನವಿಲ್ಲ, ಮರೆಯುವ ಪ್ರಶ್ನೆಯೇ ಇಲ್ಲ. ಪರಮಪೂಜ್ಯ ಶ್ರೀಗಳು ತ್ಯಾಗ, ಸೇವೆಯ ಪ್ರತೀಕ" ಎಂದು ಸ್ಮರಿಸಿದರು.

ಪೂಜ್ಯ ಶ್ರೀಗಳು ಎಂದೂ ವೈಯಕ್ತಿಕವಾಗಿ ಅದ್ದೂರಿ, ಆಡಂಬರದ ಆಚರಣೆ ಮಾಡಿಕೊಳ್ಳು ವಂತವರೂ ಅಲ್ಲ. ಭಕ್ತರ ಒತ್ತಾಯದಿಂದ ಶ್ರೀಗಳು ಹುಟ್ಟುಹಬ್ಬ ಆಚರಣೆಯಲ್ಲಿ ಗುರುವಂದನಾ ಮಹೋತ್ಸವವನ್ನಾಗಿ ಆಚರಿಸಿಕೊಂಡು ಬರಲಾಗುತ್ತಿತ್ತು. ಶ್ರೀಗಳು ೧೧೧ ವರ್ಷಗಳ ಕಾಲ ತಮ್ಮ ಇಡೀ ಬದುಕನ್ನು ತಪೋಮಯವಾಗಿಸುವ ಜತೆಗೆ ಜ್ಯೋತಿಮಯವಾಗಿ ಬೆಳಗಿ ಲಕ್ಷಾಂತರ ಜನರ ಮನೆಯ ನಂದಾದೀಪವಾಗಿ ಬೆಳಗುತ್ತಿದ್ದಾರೆ. ಲೋಕ ಕಲ್ಯಾಣಕ್ಕಾಗಿ ಬದುಕು ಸೀಮಿತವಾಗಿಟ್ಟವರ ಬದುಕು ದೊಡ್ಡ ದಿಮ್ಮಿಯಾಗಿಯೇ ಇರುತ್ತದೆ. ಅದು ಎಲ್ಲೂ ಮುಳುಗುವುದಿಲ್ಲ. ಇದೇ ರೀತಿ ಶ್ರೀಗಳ ಬದುಕು ಸಹ ಇತ್ತು. ಪೂಜ್ಯರು ಯಾವುದೇ ರೀತಿಯ ಗೌರವಾದಾರಗಳನ್ನು ಅಪೇಕ್ಷೆ ಪಟ್ಟವರಲ್ಲ. ವೈಯಕ್ತಿಕವಾಗಿ ಏನನ್ನು ಬಯಸದೇ ಸಮಾಜಕ್ಕಾಗಿ ದುಡಿದು ಬದುಕನ್ನು ಮುಡುಪಾಗಿಟ್ಟವರು. ಶೈಕ್ಷಣಿಕವಾಗಿ ಕ್ರಾಂತಿ ಮಾಡಿದ ಶ್ರೀಗಳ ಲಕ್ಷಾಂತರ ಮಕ್ಕಳ ಬದುಕು ಹಸನು ಮಾಡಿದ್ದಾರೆ. ಬದುಕಿನಲ್ಲಿ ಶಿಕ್ಷಣದ ಜತೆಗೆ ಸಂಸ್ಕಾರ ಕಲಿಸಿದ ಶ್ರೀಗಳ ಬದುಕು ಅವಿಸ್ಮರಣೀಯ" ಎಂದು ಹೇಳಿದರು.

"ಸುತ್ತೂರು, ಸಿದ್ಧಗಂಗೆ ಬೇರೆಯಲ್ಲ ಎಂದ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಸ್ವಾಮಿಗಳು ಇವೆರಡೂ ಮಠಗಳು ಸಮಾಜದ ಎರಡು ಕಣ್ಣುಗಳಿದ್ದಂತೆ. ಸಮಾಜಮುಖಿ ಸೇವೆಯನ್ನು ನಿರಂತರವಾಗಿ ಮಾಡುತ್ತಾ ಬಂದಿವೆ" ಎಂದರು.

ಶ್ರೀಗಳು ಪ್ರಧಾನಮಂತ್ರಿ ಶ್ರೀ ಮೋದಿಯವರು, ಗೃಹಸಚಿವ ಶ್ರೀ ಅಮಿತ್ ಷಾ ಅವರು ರಾಮ ಲಕ್ಷ್ಮಣರಿದ್ದಂತೆ. ರಾಷ್ಟ್ರದ ಪ್ರಗತಿಗೆ ಅಮೂಲ್ಯವಾದ ಸೇವೆಯನ್ನು ಮಾಡುತ್ತಿದ್ದಾರೆ. ಮೋದಿಯವರ ನೇತೃತ್ವದ ಕೇಂದ್ರ ಸರ್ಕಾರ ಯುದ್ಧಪೀಡಿತ ಉಕ್ರೇನ್ ನಿಂದ ಭಾರತೀಯ ವಿದ್ಯಾರ್ಥಿಗಳನ್ನು **'ಆಪರೇಷನ್ ಗಂಗಾ'** ಹೆಸರಿನಲ್ಲಿ ಪ್ರಾಣಾಪಾಯದಿಂದ ಕಾಪಾಡಿ ಕರೆದುಕೊಂಡು ಬಂದಿದ್ದು ಸಾಧನೆಯ ಮೈಲಿಗಲ್ಲು ಎಂದು ಶ್ಲಾಘಿಸಿದ ಶ್ರೀಗಳು ಇನ್ನೂ ಹತ್ತಾರು ವರ್ಷ ಅಮಿತ್ ಷಾ ಅವರು ದೇಶ ಸೇವೆ ಮಾಡುವಂತಾಗಲಿ" ಎಂದು ಹಾರೈಸಿದರು.



ಶ್ರೀಗಳವರು ಶ್ರೀ ಬಿ.ವೈ. ವಿಜಯೇಂದ್ರ ಅವರ ಕಾರ್ಯ ಸಂಘಟನೆಯನ್ನು ಪ್ರಶಂಸಿಸುತ್ತಾ, ಅವರು ಭವಿಷ್ಯದ ನಾಯಕರಾಗಿದ್ದಾರೆ. ಪೂಜ್ಯ ಶ್ರೀಗಳವರ ೧೧೫ನೇ ಜಯಂತ್ಯೋತ್ಸವದ ಸ್ವಾಗತ ಸಮಿತಿಯ ಅಧ್ಯಕ್ಷರಾಗಿ ಕಾರ್ಯಕ್ರಮ ಯಶಸ್ವಿಯಾಗುವಂತೆ ಮಾಡಿದ್ದಾರೆ. ಕೇಂದ್ರ ಸಚಿವರಾದ ಶ್ರೀ ಪ್ರಹ್ಲಾದ ಜೋಷಿಯವರ ಮೂಲಕ ಶ್ರೀ ಅಮಿತ್ ಷಾ ಅವರನ್ನು ಸಂಪರ್ಕಿಸಿ ಶ್ರೀಮಠದ ಇತಿಹಾಸ, ಪರಂಪರೆಯ ಬಗ್ಗೆ ತಿಳಿಸಿಕೊಟ್ಟು ಕಾರ್ಯಕ್ರಮದ ಉದ್ಘಾಟನೆಗೆ ಕರೆತರಲು ಕಾರಣಕರ್ತರಾಗಿದ್ದಾರೆ" ಎಂದು ಹೇಳಿದರು.

ಇದೇ ಸಂದರ್ಭದಲ್ಲಿ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿಯವರ ಕಾರ್ಯ ಸಾಧನೆಗೆ ಮೆಚ್ಚುಗೆ ಸೂಚಿಸಿದ ಶ್ರೀಗಳು ಶ್ರೀ ಬಿ.ಎಸ್. ಯಡಿಯೂರಪ್ಪನವರ ಮಾರ್ಗದರ್ಶನದಲ್ಲಿ ಗ್ರಾಮೀಣರ ಸಮಸ್ಯೆ ಬಗೆಹರಿಸಲು ಗ್ರಾಮ-೧ ಯೋಜನೆ ರೂಪಿಸಿ ಉತ್ತಮವಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ" ಎಂದು ಪ್ರಶಂಸಿಸಿದರು.

ದಿವ್ಯಸಾನ್ನಿಧ್ಯವನ್ನು ವಹಿಸಿದ್ದ ಶ್ರೀ ಸುತ್ತೂರು ಜಗದ್ಗುರು ಪರಮಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರು ತಮ್ಮ ಆಶೀರ್ವಚನದಲ್ಲಿ "ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ದಾರ್ಶನಿಕ ಕವಿ ಡಿವಿಜಿಯವರ ಹಳೇಬೇರು, ಹೊಸ ಚಿಗುರು ಕವನದ ಪ್ರತಿರೂಪ ದಂತಿದ್ದರು. ಬದುಕಿದ್ದಾಗಲೇ ದಂತಕಥೆಯಾಗಿದ್ದ ಶ್ರೀಗಳ ಬದುಕು ನಿಜಕ್ಕೂ ಅಚ್ಚರಿಪಡುವಂತಹದು. ನಡೆ-ನುಡಿಯಲ್ಲಿ ಸಾಮ್ಯತೆ ಹೊಂದಿದ್ದ ಪೂಜ್ಯ ಶ್ರೀಗಳವರು ಮಠದ ಅಭಿವೃದ್ಧಿಗಾಗಿ, ವಿದ್ಯಾರ್ಥಿಗಳ ದಾಸೋಹ, ಶಿಕ್ಷಣ, ಆಶ್ರಯಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟಿದ್ದರು. ಶ್ರೀಗಳವರು ಶ್ರೀಮಠದ ಆಡಳಿತದ ಚುಕ್ಕಾಣಿಯನ್ನಿಡಿದಾಗ ಕೇವಲ ೮೦ ಜನ ವಿದ್ಯಾರ್ಥಿ ಗಳಿದ್ದರು. ಅವರಿರುವಾಗಲೇ ಆ ಸಂಖ್ಯೆ ೧೦ ಸಾವಿರಕ್ಕೇರಿದ್ದು ಪವಾಡವೇ ಸರಿ. ಮಾತೃ ವಾತ್ಸಲ್ಯ ಮೂರ್ತಿಯಾಗಿದ್ದ ಶ್ರೀ ಶಿವಕುಮಾರ ಮಹಾಸ್ವಾಮಿಗಳು ಶ್ರೀಮಠದ, ಸಮಾಜದ ಏಳಿಗೆಗಾಗಿ ನಿರಂತರವಾಗಿ ಶ್ರಮಿಸಿ ಅಪಾರ ಕೊಡುಗೆ ನೀಡಿದರು ಎಂದು ಸ್ಮರಿಸಿದ ಸುತ್ತೂರು ಶ್ರೀಗಳು ನಿರಂತರವಾಗಿ ಶಾಂತಿ ಸಂದೇಶವನ್ನು ನೀಡುತ್ತಲೇ ಬಂದಿದ್ದ ಶ್ರೀ ಶಿವಕುಮಾರ ಸ್ವಾಮಿಗಳು ಯುದ್ಧ ವಿರೋಧಿಯಾಗಿದ್ದರು. ಇಂದು ನಡೆಯುತ್ತಿರುವ ರಷ್ಯಾ-ಉಕ್ರೇನ್ ನಡುವಿನ ಯುದ್ಧ ವನ್ನು ಕಂಡಿದ್ದರೆ ತುಂಬಾ ನೊಂದುಕೊಳ್ಳುತ್ತಿದ್ದರು. ಯುದ್ಧ ನಿಂತು ಶಾಂತಿ ನೆಲಸಿ ಲೋಕಕಲ್ಯಾಣವಾಗಲಿ" ಎಂದು ಹಾರೈಸಿದರು.

ಸಮಾರಂಭದಲ್ಲಿ ಕೇಂದ್ರ ಸಚಿವರಾದ ಶ್ರೀ ಎ. ನಾರಾಯಣಸ್ವಾಮಿ, ಶ್ರೀ ಭಗವಂತ ಖೂಬಾ, ರಾಜ್ಯ ಗೃಹ ಸಚಿವರೂ ಹಾಗೂ ತುಮಕೂರು ಜಿಲ್ಲಾ ಉಸ್ತುವಾರಿ ಸಚಿವರಾದ ಶ್ರೀ ಅರಗ ಜ್ಞಾನೇಂದ್ರ, ಪ್ರಾಥಮಿಕ ಹಾಗೂ ಪ್ರೌಢಶಿಕ್ಷಣ ಸಚಿವರಾದ ಶ್ರೀ ಬಿ.ಸಿ. ನಾಗೇಶ್, ತುಮಕೂರು ಲೋಕಸಭಾ ಸದಸ್ಯರಾದ ಶ್ರೀ ಜಿ.ಎಸ್. ಬಸವರಾಜ್, ಕೊರಟಗೆರೆ ವಿಧಾನಸಭಾ ಸದಸ್ಯರೂ ಹಾಗೂ ಮಾಜಿ ಉಪ ಮುಖ್ಯಮಂತ್ರಿಗಳಾದ ಡಾ. ಜಿ. ಪರಮೇಶ್ವರ್, ಕಾನೂನು ಸಂಸದೀಯ ಹಾಗೂ ಸಣ್ಣ ನೀರಾವರಿ ಸಚಿವರಾದ ಶ್ರೀ ಜೆ.ಸಿ. ಮಾಧುಸ್ವಾಮಿ, ತುಮಕೂರು ನಗರ ವಿಧಾನಸಭಾ ಕ್ಷೇತ್ರದ ಸದಸ್ಯರಾದ ಶ್ರೀ ಜಿ.ಬಿ. ಜ್ಯೋತಿಗಣೇಶ್, ತುಮಕೂರು ಗ್ರಾಮೀಣ ಕ್ಷೇತ್ರದ ವಿಧಾನಸಭಾ ಸದಸ್ಯರಾದ ಶ್ರೀ ಡಿ.ಸಿ. ಗೌರೀಶಂಕರ್, ತುಮಕೂರು ಮಹಾನಗರ ಪಾಲಿಕೆ ಮಹಾಪೌರರಾದ ಶ್ರೀ ಬಿ.ಜೆ. ಕೃಷ್ಣಪ್ಪ ಅವರು ಭಾಗವಹಿಸಿದ್ದರು. ಶಾಸಕರಾದ ಶ್ರೀ ಮಸಲಾ ಜಯರಾಮು, ಡಾ. ಸಿ.ಎಂ. ರಾಜೇಶಗೌಡ, ಶ್ರೀ ರೇಣುಕಾಚಾರ್ಯ, ಬಿಜೆಪಿ ರಾಷ್ಟ್ರೀಯ ಪ್ರಧಾನ ಕಾರ್ಯದರ್ಶಿ ಶ್ರೀ ಸಿ.ಟಿ. ರವಿ, ವಿಧಾನ ಪರಿಷತ್ ಸದಸ್ಯರಾದ ಶ್ರೀ ವೈ.ಎ. ನಾರಾಯಣಸ್ವಾಮಿ, ಶ್ರೀ ಚಿದಾನಂದ .ಎಂ. ಗೌಡ, ಕರ್ನಾಟಕ ಮೂಲಸೌಕರ್ಯ ಅಭಿವೃದ್ಧಿ ನಿಗಮದ ಅಧ್ಯಕ್ಷರಾದ ಶ್ರೀ ಎಂ. ರುದ್ರೇಶ್,





ವೀರಶೈವ ಅಭಿವೃದ್ಧಿ ನಿಗಮದ ಅಧ್ಯಕ್ಷರಾದ ಶ್ರೀ ಬಿ.ಎಸ್. ಪರಮಶಿವಯ್ಯ, ಬೆಂಗಳೂರು ನಗರದ ಜಿಲ್ಲಾ ಪಂಚಾಯಿತಿ ಮಾಜಿ ಅಧ್ಯಕ್ಷರಾದ ಶ್ರೀ ಮರಿಸ್ವಾಮಿ, ಶ್ರೀ ಸಿದ್ಧಗಂಗಾ ಹಳೆಯ ವಿದ್ಯಾರ್ಥಿಗಳು ಹಾಗೂ ಹಿತೈಷಿ ಸಂಘದ ಪ್ರಧಾನ ಕಾರ್ಯದರ್ಶಿ ಡಾ. ಎಂ.ಎನ್. ಚೆನ್ನಬಸಪ್ಪ, ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಟಿ.ಕೆ. ನಂಜುಂಡಪ್ಪ, ಶ್ರೀಮಠದ ಆಡಳಿತಾಧಿಕಾರಿ ಶ್ರೀ ಎಸ್. ವಿಶ್ವನಾಥಯ್ಯ, ಜಿಲ್ಲಾ ಆಡಳಿತದ ಅಧಿಕಾರಿ ವರ್ಗದವರು, ರಾಜ್ಯ ಹಾಗೂ ಜಿಲ್ಲಾ ಪೋಲೀಸ್ ವರಿಷ್ಠಾಧಿಕಾರಿಗಳು ಉಪಸ್ಥಿತರಿದ್ದರು.

ಗಡಿ ಪ್ರದೇಶಾಭಿವೃದ್ಧಿಯ ಅಧ್ಯಕ್ಷರಾದ ಡಾ. ಸಿ. ಸೋಮಶೇಖರ್ ಅವರು ಕಾರ್ಯಕ್ರಮವನ್ನು ನಿರೂಪಿಸಿದರು. ಸ್ವಾಗತ ಸಮಿತಿಯ ಸದಸ್ಯರಾದ ಶ್ರೀ ಜಿ.ಎಸ್. ರೇಣುಕಪ್ಪ ಅವರು ಶರಣು ಸಮರ್ಪಣೆ ಮಾಡಿದರು.

**ಮನರಂಜನೆ ಕಾರ್ಯಕ್ರಮ**

ಪರಮಪೂಜ್ಯರ ೧೧೫ನೇ ಜಯಂತಿ ಹಾಗೂ ಗುರುವಂದನ ಮಹೋತ್ಸವದ ಅಂಗವಾಗಿ **'ನಡೆದಾಡುವ ದೇವರ ಬಸವ ಭಾರತ'** ಪರಿಕಲ್ಪನೆಯಲ್ಲಿ ನಾದಬ್ರಹ್ಮ ಡಾ. ಹಂಸಲೇಖ ಹಾಗೂ ಖ್ಯಾತ ಗಾಯಕ ಶ್ರೀ ವಿಜಯಪ್ರಕಾಶ್ ಅವರ ನಿರ್ದೇಶನ ಹಾಗೂ ನೇತೃತ್ವದಲ್ಲಿ ಸಂಗೀತ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು. ಈ ಸಂಗೀತ ನೃತ್ಯ ಕಾರ್ಯಕ್ರಮದಲ್ಲಿ ೧೧೫. ಜನ ಗಾಯಕರು, ೧೦೦ ಪ್ರದರ್ಶಕರು ಭಾಗವಹಿಸಿ ಪ್ರೇಕ್ಷಕರಿಗೆ ರಸದೌತಣ ನೀಡಿದರು. ತಡರಾತ್ರಿ ಯವರೆಗೂ ನಡೆದ ಕಾರ್ಯಕ್ರಮವನ್ನು ಇಪ್ಪತ್ತು ಸಾವಿರಕ್ಕೂ ಹೆಚ್ಚು ಜನರು ಕಣ್ಮನ ತುಂಬಿಸಿಕೊಂಡರು. ಜನರ ಮನಸ್ಸಿನಲ್ಲಿ ಇದೊಂದು ಅವಿಸ್ಮರಣೀಯ ಕಾರ್ಯಕ್ರಮವಾಗಿ ಉಳಿಯಿತು.

**ದಾಸೋಹ ವ್ಯವಸ್ಥೆ**

'ಸಿದ್ಧಗಂಗೆ ಊಟಕ್ಕೆ ಚೆಂದ, ಶಿವಗಂಗೆ ನೋಟಕ್ಕೆ ಚೆಂದ' ಎಂಬ ನಾಣ್ನುಡಿ ಸಿದ್ಧಗಂಗೆಯ ದಾಸೋಹಕ್ಕೆ ಭಕ್ತರು, ಅಭಿಮಾನಿಗಳು ನೀಡಿದ ಪ್ರಶಸ್ತಿಯಾಗಿದೆ. ಈಗ ಈ ನಾಣ್ನುಡಿ ಬದಲಾವಣೆಯಾಗಿ 'ಸಿದ್ಧಗಂಗೆ ಊಟಕ್ಕೂ ಚೆಂದ, ನೋಟಕ್ಕೂ ಚೆಂದ' ಎನ್ನುವಂತಾಗಿದೆ. ಪರಮಪೂಜ್ಯರ ದರ್ಶನ ಭಾಗ್ಯ ಪಡೆಯಲು ಯಾರೇ ಹೋಗಲಿ ಅವರು ಹೇಳುತ್ತಿದ್ದ ಮಾತು 'ಊಟ ಮಾಡಿಕೊಂಡು ಹೋಗಿ' ಎಂದು. ಮಠಕ್ಕೆ ಹೋದವರು ಯಾರೂ ಪ್ರಸಾದ ತೆಗೆದುಕೊಳ್ಳದೆ ಹೋಗಬಾರದೆಂದು ಪೂಜ್ಯರ ಆಶಯವಾಗಿತ್ತು. ಈ ಪರಂಪರೆಯನ್ನು ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಮುಂದು ವರಿಸಿಕೊಂಡು ಬರುತ್ತಿದ್ದಾರೆ. ದಿನನಿತ್ಯ ಶ್ರೀಮಠಕ್ಕೆ







ಬರುವ ಸಾವಿರಾರು ಭಕ್ತರಿಗೆ ದಾಸೋಹ ವ್ಯವಸ್ಥೆಯ ಜೊತೆಗೆ ಜಾತ್ರೆ, ಉತ್ಸವ, ಸಮಾರಂಭಗಳಲ್ಲಿ ಬರುವ ಲಕ್ಷಾಂತರ ಭಕ್ತರಿಗೆ ಕಿಂಚಿತ್ತು ಲೋಪವಾಗದಂತೆ ಸುವ್ಯವಸ್ಥಿತವಾಗಿ ದಾಸೋಹ ವ್ಯವಸ್ಥೆ ಮಾಡುತ್ತಿರುವುದು ಪವಾಡವೇ ಸರಿ. ಈ ಪವಾಡವನ್ನು ನೋಡಿದಾಗ ಇತಿಹಾಸದಲ್ಲಿ ಓದಿರುವ ೧೨ನೇ ಶತಮಾನದ ಮಹಾಮನೆಯಲ್ಲಿ ನಡೆಯುತ್ತಿದ್ದ ದಾಸೋಹ ನಮ್ಮ ಕಣ್ಮುಂದೆ ನಿಲ್ಲುತ್ತದೆ.

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೫ನೇ ಜಯಂತಿ ಹಾಗೂ ಗುರುವಂದನಾ ಸಮಾರಂಭಕ್ಕೆ ನಾಡಿನ ಮೂಲೆ ಮೂಲೆ ಗಳಿಂದ ೨ ಲಕ್ಷಕ್ಕೂ ಹೆಚ್ಚು ಭಕ್ತರು ಆಗಮಿಸಿದ್ದು ಒಂದು ದಾಖಲೆ. ಅವರಿಗೆಲ್ಲ ಯಾವುದೇ ರೀತಿಯ ತೊಂದರೆಯಾಗದಂತೆ ಪರಮ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿ ಗಳವರ ಮಾರ್ಗ ದರ್ಶನದಲ್ಲಿ ಕೃಷಿ ಮತ್ತು ಕೈಗಾರಿಕಾ ವಸ್ತುಪ್ರದರ್ಶನದಲ್ಲಿ ಎರಡು ಕಡೆ, ಪ್ರಾರ್ಥನಾ ಮಂದಿರ, ವಜ್ರ ಮಹೋತ್ಸವ ನೆನಪಿನ ದಾಸೋಹ ಮಂದಿರ, ಲಿಂಗಾಯತರ ಕೊಪ್ಪಲು, ಸಾದರಕೊಪ್ಪಲು, ಶ್ರೀ ಉದ್ದಾನೇಶ್ವರ ಸಮುದಾಯ ಭವನ, ಅತಿಥಿ ಗೃಹವೂ ಸೇರಿದಂತೆ ಎಂಟು ಕಡೆ ವ್ಯವಸ್ಥೆ ಮಾಡಲಾಗಿತ್ತು. ಬೆಳಿಗ್ಗೆ ಉಪಹಾರದಿಂದ ಪ್ರಾರಂಭವಾದ ದಾಸೋಹ ತಡರಾತ್ರಿ ಯವರೆಗೂ ನಿರಂತರವಾಗಿ ನಡೆಯಿತು. ಬೆಳಗಿನ ಉಪಹಾರಕ್ಕೆ ಉಪ್ಪಿಟ್ಟು, ಕೇಸರಿಬಾತ್, ಮಧ್ಯಾಹ್ನ ಮತ್ತು ರಾತ್ರಿ ಊಟಕ್ಕೆ, ಪಾಯಸ, ಬೂಂದಿ, ಮಾಲದಿ, ಚಿತ್ರಾನ್ನ, ಕೋಸಂಬರಿ, ಕೂಟ್, ಅನ್ನಸಾಂಬಾರ್, ಮಜ್ಜಿಗೆಯನ್ನೊಳ ಗೊಂಡ ವಿಶೇಷ ದಾಸೋಹ ವ್ಯವಸ್ಥೆಯನ್ನು ಸ್ವಾಗತ ಸಮಿತಿಯ ಅಧ್ಯಕ್ಷ ಶ್ರೀ ಬಿ.ವೈ. ವಿಜಯೇಂದ್ರ ಅವರ ನೇತೃತ್ವದಲ್ಲಿ ಸಿದ್ಧಗಂಗಾ ವಿದ್ಯಾ ಸಂಸ್ಥೆಯ ಶಿಕ್ಷಕರು, ಸಿಬ್ಬಂದಿ ವರ್ಗದವರು, ವಿದ್ಯಾರ್ಥಿಗಳು, ಸ್ವಯಂ ಕಾರ್ಯಕರ್ತರು, ಭಕ್ತಾದಿಗಳು ಸಂತೋಷ

# ೧೧೫ ಮಕ್ಕಳಿಗೆ ನಾಮಕರಣ

ಕಳೆದ ವರ್ಷದಂತೆ ಈ ಸಲವೂ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಅನ್ನದಾನ ಸೇವಾ ಟ್ರಸ್ಟ್ ವತಿಯಿಂದ ಶ್ರೀಗಳವರ ೧೧೫ನೇ ಜಯಂತ್ಯೋತ್ಸವದ ಅಂಗವಾಗಿ ಮಕ್ಕಳಿಗೆ 'ಶಿ' ಅಕ್ಷರದಿಂದ ಪ್ರಾರಂಭವಾಗುವ ಹೆಸರುಗಳನ್ನು ನಾಮಕರಣ ಮಾಡಲಾಯಿತು.

ಶ್ರೀಮಠದಲ್ಲಿ ಹಮ್ಮಿಕೊಂಡಿದ್ದ ಈ ಉಚಿತ ನಾಮಕರಣ ಮಹೋತ್ಸವದಲ್ಲಿ ಪಾಲುಗೊಂಡಿದ್ದವರಿಗೆ ಹೊಸ ತೊಟ್ಟಿಲು, ದಿಂಬು ಹಾಗೂ ಶ್ರೀ ಶಿವಕುಮಾರ ಶ್ರೀಗಳ ಭಾವಚಿತ್ರವನ್ನು ನೀಡಲಾಯಿತು. ತುಮಕೂರು ತಾಲ್ಲೂಕಿನ ಕ್ಯಾತಸಂದ್ರದ ಶ್ರೀಮತಿ ಶಾಹಿನ್ ಹಾಗೂ ಶ್ರೀ ಜಮೀರ್ ದಂಪತಿ ತಮ್ಮ ಮಗಳಿಗೆ 'ಶಿವಮಣಿ' ಎಂದು ನಾಮಕರಣ ಮಾಡಿಸಿದ್ದು ವಿಶೇಷವಾಗಿತ್ತು. ಅವರು ಈ ಸಂದರ್ಭದಲ್ಲಿ ತಮ್ಮ ಭಾವನೆಗಳನ್ನು ಹೀಗೆ ಹಂಚಿಕೊಂಡರು. "ಸ್ವಾಮೀಜಿಯವರ ವಿಚಾರಧಾರೆ ನಮಗೆಲ್ಲಾ ಮಾದರಿಯಾಗಿದ್ದವು. ಸಮಾನತೆಯ ಸಂದೇಶ ಸಾರಿದ್ದರು. ಶಾಂತಿ, ಸಹಬಾಳ್ವೆ ನಡೆಸಲು ಅವರ ಹಾದಿಯಲ್ಲಿ ಮುನ್ನಡೆಯಬೇಕು. ಅವರ ನಡೆಯಲ್ಲಿಯೇ ನಾವು ನಡೆಯುತ್ತಿದ್ದೇವೆ. ನಮಗೆ ಹಿಂದೂಗಳಂತೆ ಇರಲು ಇಷ್ಟ. ಹಾಗಾಗಿ ಮಠದ ಆವರಣದಲ್ಲಿ ಮಗುವಿಗೆ 'ಶಿವಮಣಿ' ಎಂದು ಹೆಸರಿಡಿಸಲಾಗಿದೆ. ಸ್ವಾಮೀಜಿಯವರು ನಡೆದಾಡಿದ ಈ ಪುಣ್ಯಭೂಮಿಯಲ್ಲಿ ನಮ್ಮ ಮಗುವಿಗೆ ನಾಮಕರಣ ಮಾಡಿಸಿರುವುದು ತುಂಬಾ ಖುಷಿ ನೀಡಿದೆ. ಇಂತಹ ಒಂದು ಉತ್ತಮ ಅವಕಾಶ ನಮಗೆ ದೊರೆತಿದೆ" ಎಂದು ದಂಪತಿಗಳು ಸಂತೋಷ ವ್ಯಕ್ತಪಡಿಸಿದರು. ಈ ಅಭೂತಪೂರ್ವವಾದ ಕಾರ್ಯಕ್ರಮದಲ್ಲಿ ಭಾಗವಹಿಸಲು ನಾಡಿನ ವಿವಿಧ ಮೂಲೆಗಳಿಂದ ತಮ್ಮ ಮಕ್ಕಳಿಗೆ ನಾಮಕರಣ ಮಾಡಲು ಭಕ್ತರು ಭಾಗವಹಿಸಿದ್ದು ವಿಶೇಷವಾಗಿತ್ತು.

ಕಳೆದ ನಾಲ್ಕು ವರ್ಷಗಳಿಂದ ನಾಮಕರಣ ಮಹೋತ್ಸವವನ್ನು ಏರ್ಪಡಿಸುವುದರ ಮೂಲಕ ಈ ತಲೆಮಾರಿನ ಜನರಿಗೆ ಪರಮಪೂಜ್ಯರ ಹೆಸರು ನಿತ್ಯ ಹಸಿರಾಗಿರುವಂತೆ ಮಾಡುತ್ತಾ ಬಂದಿರುವ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ಅನ್ನದಾನ ಸೇವಾ ಟ್ರಸ್ಟ್‌ನ ಪದಾಧಿಕಾರಿಗಳವರ ಈ ಸೇವೆ ಅಭಿನಂದನಾರ್ಹವಾದುದು. ಈ ಕಾರ್ಯ ಹೀಗೆಯೇ ಮುಂದುವರಿಯಲಿ ಎಂದು ಸಿದ್ಧಗಂಗಾ ಆಶಿಸುತ್ತದೆ ಹಾಗೂ ಶುಭ ಹಾರೈಸುತ್ತದೆ.

ದಿಂದ ದಾಸೋಹ ಬಡಿಸುವ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು.

**ಅಭಿನಂದನಾರ್ಹರು :**

ಕಾರ್ಯಕ್ರಮ ಸುವ್ಯವಸ್ಥಿತವಾಗಿ, ಅರ್ಥಪೂರ್ಣವಾಗಿ, ಅದ್ಧೂರಿಯಾಗಿ ನಡೆಯಲು ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀ ಬಿ.ವೈ. ವಿಜಯೇಂದ್ರರವರ ನೇತೃತ್ವದಲ್ಲಿ ಕ್ರಿಯಾಶೀಲ ತಂಡದ ಸದಸ್ಯರಾದ ಗ್ರಾಮೀಣ ಮೂಲ ಸೌಕರ್ಯ ಅಭಿವೃದ್ಧಿ ನಿಗಮದ ಅಧ್ಯಕ್ಷರಾದ ಶ್ರೀ ಎಂ. ರುದ್ರೇಶ್, ಬೆಂಗಳೂರು ನಗರ ಜಿಲ್ಲಾ ಪಂಚಾಯತಿ ಮಾಜಿ ಅಧ್ಯಕ್ಷರಾದ ಶ್ರೀ ಮರಿಸ್ವಾಮಿ, ವಿಜಯ ಸೇನೆ ಅಧ್ಯಕ್ಷರಾದ ಶ್ರೀ ಎಚ್.ಎನ್. ದೀಪಕ್, ಜತೆಗೆ ಬಿಜೆಪಿ ಯುವ ಮೋರ್ಚಾ, ಬಿಎಸ್‌ವೈ ಬಳಗವು ಬೆಂಬಲವಾಗಿ ನಿಂತು ಕಾರ್ಯಕ್ರಮ ಯಶಸ್ವಿಯಾಗುವವಂತೆ ಮಾಡಿದುದು ಎಲ್ಲರ ಮೆಚ್ಚುಗೆಗೆ ಪಾತ್ರವಾಯಿತು.

ಕಾನೂನು ಸುವ್ಯವಸ್ಥೆ ಕಾಪಾಡಲು ಪೊಲೀಸ್ ಇಲಾಖೆ ಎಲ್ಲೂ ಅಹಿತಕರ ಘಟನೆಗಳು ಸಂಭವಿಸದಂತೆ ನೋಡಿಕೊಳ್ಳುವಲ್ಲಿ ಸಲ್ಲಿಸಿದ ಸೇವೆ ಅನನ್ಯ. ಈ ಕಾರ್ಯದಲ್ಲಿ ತೊಡಗಿಸಿಕೊಂಡ ಎಲ್ಲಾ ಪೊಲೀಸ್ ಅಧಿಕಾರಿ, ಸಿಬ್ಬಂದಿ ವರ್ಗದವರು ಅಭಿನಂದನಾರ್ಹರು.

ಹಾಗೆಯೇ ಶ್ರೀಮಠದ ಆಡಳಿತ ವರ್ಗದವರೂ, ಸಿಬ್ಬಂದಿಯವರು ಕಾರ್ಯಕ್ರಮ ಯಶಸ್ವಿಯಾಗಲು ಹಗಲಿರುಳು ಪ್ರತ್ಯಕ್ಷವಾಗಿ, ಪರೋಕ್ಷವಾಗಿ ಶ್ರಮಿಸಿದ್ದಾರೆ. ದಾಸೋಹ ವ್ಯವಸ್ಥೆಯ ಮೇಲ್ವಿಚಾರಣೆ ನೋಡಿಕೊಂಡ ವಿವಿಧ ಮಠಗಳ ಹರಗುರು ಚರಮೂರ್ತಿಗಳು, ದಾಸೋಹ ತಯಾರಿಕೆಯಲ್ಲಿ ತಮ್ಮನ್ನು ಅರ್ಪಿಸಿಕೊಂಡ ಬಾಣಸಿಗರು, ಸ್ವಯಂ ಸೇವಕರ ಸೇವೆಯನ್ನು ಮರೆಯುವಂತಿಲ್ಲ. ಇವರೆಲ್ಲರಿಗೂ ಸಿದ್ಧಗಂಗಾ ಅಭಿನಂದಿಸುತ್ತದೆ ಹಾಗೂ ಧನ್ಯಾವಾದಗಳನ್ನು ಸಲ್ಲಿಸುತ್ತದೆ.

### ಶ್ರೀವಾಣಿ

ಎಲ್ಲಿಯವರೆಗೆ ನಮ್ಮ ದೃಷ್ಟಿ, ಭಾವನೆ, ಆಲೋಚನೆ,
ಕೆಲಸ ಕಾರ್ಯಗಳು ದೊಡ್ಡವಾಗುವುದಿಲ್ಲವೋ
ಅಲ್ಲಿಯವರೆಗೆ ನಾವು ದೊಡ್ಡವರಾಗುವುದಿಲ್ಲ
ಎಂಬುದನ್ನು ತಿಳಿಯಬೇಕು.

## ‘ಸಿದ್ಧಗಂಗಾ’ ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ **‘ಸಿದ್ಧಗಂಗಾ’** ನಿರಂತರವಾಗಿ ನಿಮ್ಮ ಮನ–ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/– ರೂ, ೧೦೦೦/–ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/– ರೂ, ೧೦೦/– ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/– ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/– ರೂ ಸಂದಾಯ ಮಾಡಿರುವವರು ಬಾಕಿ ೧೦೦೦/– ರೂ ಸಂದಾಯ ಮಾಡಬೇಕು. ೧೦೦೦/– ರೂ ಸಂದಾಯ ಮಾಡಿರುವವರು ಬಾಕಿ ೫೦೦/– ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ **ನಗದು/ಚೆಕ್/ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (LM) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **‘ಸಿದ್ಧಗಂಗಾ’** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ.

ಪ್ರಕಾಶಕರು,
‘ಸಿದ್ಧಗಂಗಾ’ ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ–೫೭೨ ೧೦೪.
ದೂರವಾಣಿ : ೦೮೧೬–೨೨೮೨೩೨೨



ವರದಿ

# ರಸ್ತೆಗೆ ಪರಮಪೂಜ್ಯ ಶ್ರೀಗಳವರ ಹೆಸರು ನಾಮಕರಣ

**ಲಿಂ. ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೫ನೇ ಜಯಂತ್ಯೋತ್ಸವದ ಸವಿನೆನಪಿಗಾಗಿ ತುಮಕೂರು ನಗರದ ರಾಷ್ಟ್ರೀಯ ಹೆದ್ದಾರಿ–೨೦೬ರ ಬಟವಾಡೆ ಮಿರ್ಜಿ ಪೆಟ್ರೋಲ್ ಬಂಕ್‌ನಿಂದ ಗುಬ್ಬಿ ಗೇಟ್‌ವರೆಗಿನ ರಸ್ತೆಗೆ ಮಹಾನಗರ ಪಾಲಿಕೆ ವತಿಯಿಂದ ‘ಡಾ. ಶಿವಕುಮಾರ ಮಹಾಸ್ವಾಮಿಗಳವರ ರಸ್ತೆ’ ಎಂದು ನಾಮಕರಣ ಮಾಡಲಾಯಿತು.**



ಸಂಸದ ಶ್ರೀ ಜಿ.ಎಸ್. ಬಸವರಾಜು ಅವರಿಂದ ನಾಮಫಲಕದ ಲೋಕಾರ್ಪಣೆ. ಹಾಗೂ ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಭಕ್ತಿ ಸಮರ್ಪಣೆ

ಮಾರ್ಚ್ ೩೧ ರಂದು ಬಟವಾಡೆಯಲ್ಲಿ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಸಂಸದ ಶ್ರೀ ಜಿ.ಎಸ್. ಬಸವರಾಜು ಅವರು ನಾಮಫಲಕವನ್ನು ಲೋಕಾರ್ಪಣೆ ಮಾಡಿ “ಇಂದು ನಮ್ಮೆಲ್ಲರ ಪಾಲಿಗೆ ಸುದಿನ. ಶ್ರೀಗಳವರ ೧೧೫ನೇ ಜಯಂತಿ ಸವಿನೆನಪಿಗಾಗಿ ಬಟವಾಡೆಯಿಂದ ಗುಬ್ಬಿ ಗೇಟಿನವರೆಗಿನ ರಸ್ತೆಗೆ ಶ್ರೀಗಳವರ ಹೆಸರನ್ನು ನಾಮಕರಣ ಮಾಡಲಾಗಿದೆ. ಈ ಹೆಸರು ಸದಾ ಜನರ ಮನಸ್ಸಿನಲ್ಲಿ ಶಾಶ್ವತವಾಗಿರಬೇಕು, ನಗರಕ್ಕೆ ಆಗಮಿಸುವ ಪ್ರತಿಯೊಬ್ಬರು ಶ್ರೀಗಳವರ ಪುತ್ಥಳಿಯನ್ನು ನೋಡಿಕೊಂಡೇ ತೆರಳುವಂತೆ ಮಾಡುವ ಸಲುವಾಗಿ ಬಟವಾಡೆ ಬಳಿಯೇ ಶ್ರೀಗಳವರ ಬೃಹತ್ ಪುತ್ಥಳಿ ನಿರ್ಮಾಣ ಮಾಡುವ ಬಗ್ಗೆ ತುಮಕೂರು ನಗರ ಮಹಾನಗರ ಪಾಲಿಕೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಬೇಕೆಂದು ಸಲಹೆ ಮಾಡಿದರು.

ತುಮಕೂರು ನಗರ ಶಾಸಕರಾದ ಶ್ರೀ ಜಿ.ಬಿ. ಜ್ಯೋತಿಗಣೇಶ್ ಅವರು ಮಾತನಾಡಿ “ಕರ್ನಾಟಕ ರತ್ನ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯವರ ಹೆಸರನ್ನು ರಸ್ತೆಗೆ ನಾಮಕರಣ ಮಾಡುವುದರ ಮೂಲಕ ಭಕ್ತಿ ಗೌರವವನ್ನು ಸಮರ್ಪಿಸಲಾಗಿದೆ. ಅದೇ ರೀತಿ ತುಮಕೂರು ನಗರವನ್ನು ಪ್ರವೇಶಿಸುವ ಬಟವಾಡೆಯಲ್ಲಿಯೇ ಶ್ರೀಗಳವರ ಬೃಹತ್ ಪ್ರತಿಮೆ ನಿರ್ಮಾಣವಾದರೆ ಅದೊಂದು ಉತ್ತಮ ಕಾರ್ಯವಾಗಲಿದೆ” ಎಂದರು.

ಸಮಾರಂಭದ ದಿವ್ಯಸಾನ್ನಿಧ್ಯವನ್ನು ವಹಿಸಿದ್ದ ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ತಮ್ಮ ಶಿವನುಡಿಗಳಲ್ಲಿ “ಮಹಾನಗರ ಪಾಲಿಕೆ ವತಿಯಿಂದ ಬಿ.ಎಚ್. ರಸ್ತೆಗೆ ಪರಮಪೂಜ್ಯರ ಹೆಸರನ್ನು ಅಧಿಕೃತವಾಗಿ ಇಂದು ನಾಮಕರಣ ಮಾಡಲಾಗಿದೆ. ಈ ಕಾರ್ಯ ಸಾಕಾರವಾಗಲು ಸಂಸದರು, ಶಾಸಕರು, ಮಹಾಪೌರರು ಎಲ್ಲ ಸದಸ್ಯರು ಹಾಗೂ ಆಯುಕ್ತರ ಅಪಾರವಾದ ಪರಿಶ್ರಮವಿದೆ. ಪರಮಪೂಜ್ಯರ ಹೆಸರು ಶಾಶ್ವತವಾಗಿ ಉಳಿಯುವ ಕಾರ್ಯ ಇದಾಗಿದೆ” ಎಂದು ಹೇಳಿದರು.

ಸಮಾರಂಭದಲ್ಲಿ ಮೇಯರ್ ಶ್ರೀ ಬಿ.ಜಿ. ಕೃಷ್ಣಪ್ಪ, ಪಾಲಿಕೆ ಸದಸ್ಯರಾದ ಶ್ರೀಮತಿ ಚಂದ್ರಕಲಾ ಪುಟ್ಟರಾಜು, ಶ್ರೀಮತಿ ಗಿರಿಜಾ ಧನಿಯಕುಮಾರ್, ಶ್ರೀ ನಯಾಜ್ ಅಹಮದ್, ಶ್ರೀ ಮಹೇಶ್, ಮಹಾನಗರ ಪಾಲಿಕೆ ಆಯುಕ್ತೆ ಶ್ರೀಮತಿ ರೇಣುಕಾ ಅವರು ಉಪಸ್ಥಿತರಿದ್ದರು.

ಕ್ಷೇತ್ರವಾರ್ತೆ

# ಕಾಂಗ್ರೆಸ್ ವರಿಷ್ಠರಾದ ಶ್ರೀ ರಾಹುಲ್ ಗಾಂಧಿ ಶ್ರೀಮಠಕ್ಕೆ ಭೇಟಿ

ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ೧೧೫ನೇ ಜಯಂತಿ ಹಾಗೂ ಗುರುವಂದನಾ ಮಹೋತ್ಸವದ ಮುನ್ನಾದಿನ (ಮಾರ್ಚ್ ೩೧) ಕಾಂಗ್ರೆಸ್ ವರಿಷ್ಠ ಶ್ರೀ ರಾಹುಲ್ ಗಾಂಧಿ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಶಿವಕುಮಾರ ಶಿವಯೋಗಿಗಳವರ ಗದ್ದುಗೆ ದರ್ಶನ ಮಾಡಿ ಪ್ರಾರ್ಥನೆ ಸಲ್ಲಿಸಿದರು. ಗದ್ದುಗೆಗೆ ಭೇಟಿ ನೀಡಿದ ಸಂದರ್ಭದಲ್ಲಿ ಶ್ರೀ ರಾಹುಲ್ ಗಾಂಧಿಯವರ ಹಣೆಗೆ ವಿಭೂತಿ ಧಾರಣೆ ಮಾಡಲಾಯಿತು. ಧ್ಯಾನಮಂದಿರದಲ್ಲಿ ಪ್ರಾರ್ಥನೆ ಸಲ್ಲಿಸಿದರು. ನಂತರ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದರ್ಶನ ಮಾಡಿ ಆಶೀರ್ವಾದ ಪಡೆದರು, ಕಾಂಗ್ರೆಸ್ ಮುಖಂಡರ ಜತೆ ಉಪಹಾರ ಸ್ವೀಕರಿಸಿದರು.

ನಂತರ ಪ್ರತಿನಿತ್ಯ ನಡೆಯುವ ಸಾಮೂಹಿಕ ಪ್ರಾರ್ಥನೆಯಲ್ಲಿ ಭಾಗವಹಿಸಿ ಮಠದ ವಿದ್ಯಾರ್ಥಿಗಳನ್ನು ಕುರಿತು ಮಾತನಾಡಿ "ಪ್ರಸ್ತುತ ನಮ್ಮ ದೇಶದಲ್ಲಿ ಹರಡುತ್ತಿರುವ ದ್ವೇಷವನ್ನು ನಿಲ್ಲಿಸುವ ತುರ್ತು ಅಗತ್ಯವಿದೆ. ಭ್ರಾತೃತ್ವ ಭಾವನೆ ಹರಡಬೇಕು. ಬಸವಣ್ಣನವರ ಜಾತ್ಯಾತೀತ ಮನೋಭಾವ ಅವರ ವಚನಗಳ ಆಶಯ ನಮ್ಮೆಲ್ಲರ ಮೂಲಮಂತ್ರವಾಗಬೇಕು. ಬಸವಣ್ಣನವರ ಸಂದೇಶದಂತೆ ಶ್ರೀಮಠದಲ್ಲಿ ಭ್ರಾತೃತ್ವ ಸಾರಲಾಗುತ್ತಿದೆ. ಸಾಮರಸ್ಯ ಸಾರುವ ಕೆಲಸವನ್ನು ಶ್ರೀ ಸಿದ್ಧಗಂಗಾ ಮಠ ಬಹಳ ಹಿಂದಿನಿಂದಲೂ ಮಾಡುತ್ತಾ ಬಂದಿದೆ. ಸಿದ್ಧಗಂಗಾ ಮಠ ಹಾಗೂ ನಮ್ಮ ಕುಟುಂಬಕ್ಕೂ ಹಿಂದಿನಿಂದಲೂ ಅವಿನಾಭಾವದಿಂದ ಕೂಡಿದ ಗೌರವಯುತ ಸಂಬಂಧವಿದೆ. ನಮ್ಮ ಅಜ್ಜಿ ಇಂದಿರಾಗಾಂಧಿ, ತಂದೆ ರಾಜೀವ್ ಗಾಂಧಿ, ತಾಯಿ ಸೋನಿಯಾ ಗಾಂಧಿ ಅವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಆಶೀರ್ವಾದ ಹಾಗೂ ಮಾರ್ಗದರ್ಶನ ಪಡೆದಿದ್ದರು. ಈಗ ನಾನು ಮಠಕ್ಕೆ ಬಂದಿರುವುದು ನನಗೆ ವೈಯಕ್ತಿಕವಾಗಿ ಬಹಳ ಸಂತೋಷವಾಗಿದೆ. ಸಿದ್ಧಗಂಗಾ ಮಠದ ಶಿಕ್ಷಣ ಹಾಗೂ ದಾಸೋಹ ಈ ದೇಶಕ್ಕೆ ಮಾದರಿಯಾಗಿದೆ.



ಶ್ರೀ ರಾಹುಲ್ ಗಾಂಧಿಯವರು ಶಿವಯೋಗಿಗಳ ಧ್ಯಾನ ಮಂದಿರದಲ್ಲಿ ಪ್ರಾರ್ಥನೆ ಸಲ್ಲಿಸುತ್ತಿರುವುದು





ಶ್ರೀ ರಾಹುಲ್ ಗಾಂಧಿಯವರು ಪ್ರಾರ್ಥನಾ ಸಭೆಯಲ್ಲಿ ವಿದ್ಯಾರ್ಥಿಗಳನ್ನು ಉದ್ದೇಶಿಸಿ ಮಾತನಾಡುತ್ತಿರುವುದು

ಹಿಂದೆ ನಾನು ಮಠಕ್ಕೆ ಭೇಟಿ ನೀಡಿದ್ದಾಗ ಲಿಂಗೈಕ್ಯ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮೀಜಿ ಅವರ ಆಶೀರ್ವಾದ ಪಡೆದಿದ್ದೆ. ಈ ಬಾರಿ ಅವರಿಲ್ಲದಿರುವುದು ಬೇಸರದ ಸಂಗತಿ, ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮಿಜಿಯವರು ಹಾಕಿಕೊಟ್ಟ ಮಾರ್ಗ ನಮಗೆ ದಾರಿದೀಪವಾಗಿದೆ" ಎಂದು ಹೇಳಿದ ಶ್ರೀ ರಾಹುಲ್ ಗಾಂಧಿಯವರು ಒಂದು ಗಂಟೆಗೂ ಹೆಚ್ಚು ಕಾಲ ಶ್ರೀಮಠದಲ್ಲಿದ್ದು ವಿದ್ಯಾರ್ಥಿಗಳ ಜತೆ ಮುಕ್ತವಾಗಿ ಮಾತನಾಡಿದರು.

ಆಶೀರ್ವಚನ ನೀಡಿದ ಪರಮಪೂಜ್ಯ ಡಾ. ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು " ಸಿದ್ಧಗಂಗಾ ಮಠಕ್ಕೂ ಶ್ರೀಮತಿ ಇಂದಿರಾ ಗಾಂಧಿ ಕುಟುಂಬಕ್ಕೂ ಸುದೀರ್ಘ ಇತಿಹಾಸವಿದೆ. ಹಿಂದೆ ಶ್ರೀಮತಿ ಸೋನಿಯಾ ಗಾಂಧಿಯವರು ಶ್ರೀಮಠಕ್ಕೆ ಭೇಟಿ ನೀಡಿದ ಸಂದರ್ಭದಲ್ಲಿ ಪೂಜ್ಯ ಗುರುಗಳು, ತಾವು ಹಾಗೂ ಸೋನಿಯಾ ಗಾಂಧಿಯವರು ಒಟ್ಟಿಗೆ ಕಾರಿನಲ್ಲಿ ಪ್ರಯಾಣಿಸಿದ್ದು ಅವಿಸ್ಮರಣೀಯ ಘಟನೆ. ಶ್ರೀ ಸಿದ್ಧಗಂಗಾ ಮಠ ಎಲ್ಲಾ ಜಾತಿ, ಧರ್ಮದವರನ್ನು ಸಮಾನವಾಗಿ ಕಾಣುತ್ತಾ ಬಂದಿದೆ. ೧೨ನೇ ಶತಮಾನದ ಬಸವಣ್ಣನವರ ಹಾಗೂ ವಚನಕಾರರ ಆಶಯಗಳಂತೆ ನಡೆಯುತ್ತಿದೆ" ಎಂದರು.

ಶ್ರೀ ರಾಹುಲ್ ಗಾಂಧಿಯವರು ಯುವ ಜನರಿಗೆ ಸ್ಫೂರ್ತಿ. ಲಿಂಗೈಕ್ಯ ಶ್ರೀಗಳು ಪ್ರಜಾಪ್ರಭುತ್ವ ಯಶಸ್ವಿಯಾಗಲು ಗುಣಸಂಪನ್ನ ರಾಜಕೀಯ ಮುಖಂಡರ ಅಗತ್ಯವಾಗಿ ಬೇಕು ಎಂದು ಪದೇ ಪದೇ ಹೇಳುತ್ತಿದ್ದರು. ಶ್ರೀ ರಾಹುಲ್ ಗಾಂಧಿ ಅವರಿಗೆ ಭಗವಂತ ಶಕ್ತಿ ಕೊಟ್ಟು ಸನ್ಮಂಗಳವನ್ನುಂಟು ಮಾಡಲಿ ಎಂದು ಹಾರೈಸಿದರು. ನಂತರ ಶ್ರೀ ರಾಹುಲ್ ಗಾಂಧಿ ಅವರಿಗೆ ಈ ಹಿಂದೆ ಮಠಕ್ಕೆ ಭೇಟಿ ನೀಡಿದ್ದ ಇಂದಿರಾ ಗಾಂಧಿ, ರಾಜೀವ್ ಗಾಂಧಿ ಹಾಗೂ ಸೋನಿಯಾ ಗಾಂಧಿ ಅವರ ಭಾವಚಿತ್ರಗಳನ್ನು ಹಾಗೂ ಸ್ಮರಣಿಕೆಯನ್ನು ನೀಡಿ ಸನ್ಮಾನಿಸಿ ಆಶೀರ್ವದಿಸಿದರು.

ಈ ಸಂದರ್ಭದಲ್ಲಿ ಕೆಪಿಸಿಸಿ ಅಧ್ಯಕ್ಷ ಶ್ರೀ ಡಿ.ಕೆ. ಶಿವಕುಮಾರ್, ವಿರೋಧ ಪಕ್ಷದ ನಾಯಕ ಹಾಗೂ ಮಾಜಿ ಮುಖ್ಯಮಂತ್ರಿ ಶ್ರೀ ಸಿದ್ಧರಾಮಯ್ಯ, ವಿಧಾನ ಪರಿಷತ್ ಪ್ರತಿಪಕ್ಷದ ನಾಯಕ ಶ್ರೀ ಬಿ.ಕೆ. ಹರಿಪ್ರಸಾದ್, ರಾಜ್ಯ ಉಸ್ತುವಾರಿ ಶ್ರೀ ರಣದೀಪಸಿಂಗ ಸುರ್ಜೆವಾಲ, ಪ್ರಚಾರ ಸಮಿತಿ ಅಧ್ಯಕ್ಷ ಶ್ರೀ ಎಂ.ಬಿ. ಪಾಟೀಲ್, ಕಾರ್ಯಾಧ್ಯಕ್ಷ ಶ್ರೀ ಈಶ್ವರ ಖಂಡ್ರೆ, ಮಾಜಿ ಉಪ ಮುಖ್ಯಮಂತ್ರಿ ಡಾ. ಜಿ. ಪರಮೇಶ್ವರ್, ಶ್ರೀ ಧ್ರುವನಾರಾಯಣ, ಮಾಜಿ ಸಂಸದ ಶ್ರೀ ಕೆ.ಎಚ್. ಮುನಿಯಪ್ಪ, ಶ್ರೀ ಬಿ.ಎನ್. ಚಂದ್ರಪ್ಪ, ಯುವ ಕಾಂಗ್ರೆಸ್ ರಾಷ್ಟ್ರೀಯ ಅಧ್ಯಕ್ಷ ಶ್ರೀ ಶ್ರೀನಿವಾಸ, ಶ್ರೀಮತಿ ಲಕ್ಷ್ಮೀ ಹೆಬ್ಬಾಳ್ಕರ್, ಶ್ರೀ ಟಿ.ಬಿ. ಜಯಚಂದ್ರ, ಶ್ರೀ ಎಸ್. ರಫೀಕ್ ಅಹಮದ್, ಶ್ರೀ ಮುರಳೀಧರ ಹಾಲಪ್ಪ, ಶ್ರೀ ಆರ್. ರಾಮಕೃಷ್ಣ ಮೊದಲಾದವರು ಉಪಸ್ಥಿತರಿದ್ದರು.

ಸಾಂದರ್ಭಿಕ

# ಬಸವ ದಾಸೋಹ

## (ಗ್ರಾಮಾಂತರ ಬಸವ ಜಯಂತಿ ಯೋಜನೆ)

– ಕೋ.ರಂ. ಬಸವರಾಜು *

ಶ್ರೀ ಸಿದ್ಧಗಂಗಾ ಕ್ಷೇತ್ರವನ್ನು ತ್ರಿವಿಧ ದಾಸೋಹ ಕೇಂದ್ರವೆಂದೂ, ಗುರುಪರಂಪರೆಯನ್ನು ತ್ರಿವಿಧ ದಾಸೋಹಿಗಳೆಂದೂ ಕರೆಯುವುದು ಲೋಕಪ್ರಸಿದ್ಧಿ. ಅನ್ನ ಅರಿವು ಆಶ್ರಯ ಇವೇ ತ್ರಿವಿಧ ದಾಸೋಹವೆಂಬುದೇ ರೂಢಿಗತ. ಆದರೆ ಉದ್ದಾನ ಶಿವಯೋಗಿಗಳ ಕಾಲದಲ್ಲಿ ಅಭಯ ದಾಸೋಹವೂ ಪರಮಪೂಜ್ಯ ಶ್ರೀ ಶ್ರೀ ಶ್ರೀಶಿವಕುಮಾರಮಹಾಶಿವಯೋಗಿಗಳ ಕಾಲದಲ್ಲಿ ಬಸವ ದಾಸೋಹವೂ ಸೇರ್ಪಡೆಯಾಗಿ ಇಂದು ಶ್ರೀ ಸಿದ್ಧಗಂಗಾ ಕ್ಷೇತ್ರವು ಪಂಚವಿಧ ದಾಸೋಹ ಕೇಂದ್ರವೆನಿಸಿದೆ.

ಸಂಕಲ್ಪ ಮಾತ್ರೋದಯಸಿದ್ಧರೂ, ಕಾರ್ಯಫಲಾನುಮೇಯರೂ ಆದ ಪರಮಪೂಜ್ಯ ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾಶಿವಯೋಗಿಗಳವರ ಶಿವಸಂಕಲ್ಪದಿಂದುಸಿದ ಮಹಾಯೋಜನೆಯೇ ಈ 'ಗ್ರಾಮಾಂತರ ಬಸವ ಜಯಂತಿ'. ಭಗವಾನ್ ಬಸವೇಶ್ವರರ ದಿವ್ಯತತ್ತ್ವಗಳನ್ನು ಸಾಕಾರಗೊಳಿಸಲು ೧೯೭೮ ರಲ್ಲಿ ರೂಪುಗೊಂಡ ಒಂದು ವಿಶಿಷ್ಟ ಯೋಜನೆಯಿದು. ಇಂಥ ಮಹಾಯೋಜನೆಯಲ್ಲಿ ಮುಖ್ಯವಾದ ಸಮಾಜಮುಖೀ ಪ್ರಯೋಗವೇ 'ಜಗಜ್ಯೋತಿ ಬಸವೇಶ್ವರ' ನಾಟಕ ಪ್ರದರ್ಶನ. ಈ ಯೋಜನೆಯ ಪ್ರಾರಂಭದಿಂದಲೂ ನಾಟಕದಲ್ಲಿ ಜಾತವೇದಮುನಿ ಹಾಗೂ ಸಿದ್ಧರಾಮನ ಪಾತ್ರವನ್ನು ನಿರ್ವಹಿಸುತ್ತಾ ಬಂದಿದ್ದ ನನ್ನೆರಡು ಅನಿಸಿಕೆಗಳನ್ನು ಇಲ್ಲಿ ಅಕ್ಷರಗೊಳಿಸಲಿಚ್ಛಿಸುತ್ತೇನೆ.

ಇದು ಪ್ರಾರಂಭವಾದದ್ದು ೧೯೭೮ರಲ್ಲಿ. ಪ್ರಪ್ರಥಮ ಕಾರ್ಯಕ್ರಮ ಮಾಗಡಿ ತಾ॥ ಬ್ಯಾಲಕೆರೆಯಲ್ಲಿ. ಗ್ರಾಮಾಂತರ ಜನತೆಯ ಬದುಕು ಹಸನಾಗಬೇಕು, ಪರಸ್ಪರ ದ್ವೇಷಾಸೂಯೆಗಳನ್ನು ತೊರೆದು ಒಮ್ಮುಖವಾಗಿ ಬಾಳಬೇಕು, ಜನ ಸೋಮಾರಿಗಳಾಗದೆ ಕಾರ್ಯತತ್ಪರರಾಗಬೇಕು, ದುಡಿದು ದಾಸೋಹ ಮಾಡಬೇಕು, ಕೀಳರಿಮೆ ಹೋಗಬೇಕು, ದೇವರಲ್ಲಿ ನಂಬಿಕೆಯಿಡಬೇಕು, ಸ್ವಾವಲಂಬಿಗಳಾಗಬೇಕು–ಇತ್ಯಾದಿಯಾಗಿ ಬಸವಣ್ಣನವರು ಕಟ್ಟ ಬಯಸಿದ್ದ ಹಾಗೂ ಪರಮಪೂಜ್ಯರು ಕನಸು ಕಂಡ ಸುಭಿಕ್ಷಗ್ರಾಮಸ್ವರಾಜ್ಯದ ಕಲ್ಪನೆಯನ್ನು ಸಾಕಾರಗೊಳಿಸುವ ರೀತಿಯಲ್ಲಿ ಈ ಯೋಜನೆಯು ಯಶಸ್ವಿಯಾಗಿ ನಡೆಯಿತು. ಅಂದಿನ ಆ ದಿನಮಾನಗಳಲ್ಲಿ ಕಾರ್ಯಕ್ರಮದ ಕೇಂದ್ರವಾದ ನಿರ್ದಿಷ್ಟ ಗ್ರಾಮ ಹಾಗೂ ಅಕ್ಕಪಕ್ಕದ ಎಲ್ಲಾ ಗ್ರಾಮಗಳ, ಎಲ್ಲಾ ವರ್ಗದ ಮಹಾಜನತೆಯು ಬಡವ ಬಲ್ಲಿದರೆಂಬ ಭೇದಭಾವವಳಿದು ಯಥಾಶಕ್ತಿ ತನು ಮನ ಧನಗಳನ್ನರ್ಪಿಸಿ ಸಕ್ರಿಯವಾಗಿ ಪಾಲ್ಗೊಂಡು ಸಂಭ್ರಮಿಸುತ್ತಿದ್ದರು. ಇಡೀ ದಿನ ಪೂರ್ತಿ ಜನತೆ ವ್ಯಾವಹಾರಿಕ ಜಗತ್ತಿನೊಡನೆ ಪ್ರಪಂಚು ಮಾಡುವುದನ್ನು ಬಿಟ್ಟು ಬಸವದರ್ಶನದ ಭಕ್ತಿ ವಾರಿಧಿಯಲ್ಲಿ ಮುಳುಗಿ ಹೋಗುತ್ತಿತ್ತು.

ಬೆಳಿಗ್ಗೆ ಪ್ರಾರಂಭವಾದ ಕಾರ್ಯಕ್ರಮವು ನಾಳೆ ಸೂರ್ಯೋದಯದೊಂದಿಗೆ ಮುಕ್ತಾಯವಾಗುತ್ತಿತ್ತು. ಎರಡು ಅಧಿವೇಶನಗಳಲ್ಲಿ ವಿದ್ವಾಂಸರಿಂದ ವಿಶೇಷೋಪನ್ಯಾಸಗಳು ಹಾಗೂ ಪರಮಪೂಜ್ಯರ ಆಶೀರ್ವಚನ ಹಾಗೂ ದಾಸೋಹಗಳು ಜರುಗುತ್ತಿದ್ದವು. ನಂತರ ಇಡೀ ರಾತ್ರಿ ಶ್ರೀ ಬಸವೇಶ್ವರ ನಾಟಕ ಪ್ರದರ್ಶನವಾಗುತ್ತಿತ್ತು. ಜ್ಞಾನದಾಸೋಹ, ದರ್ಶನ ದಾಸೋಹ, ಪ್ರಸಾದ ದಾಸೋಹವನ್ನು ಒಟ್ಟಿಗೆ ಪಡೆಯುತ್ತಿತ್ತು. ಭಕ್ತರು ಪರಮಪೂಜ್ಯ ಮಹಾಜಂಗಮದ ದರ್ಶನ ಸ್ಪರ್ಶನಾಶೀರ್ವಾದಗಳಿಂದ ಪುನೀತರಾಗಿ ಪುಳಕಿತರಾಗುತ್ತಿದ್ದರು. ಮಹಾಶಿವಯೋಗಿ ಮೆಟ್ಟಿದ ಧರೆ ಪಾವನವಾಗುತ್ತಿತ್ತು. ಎರಡನೆಯ ಯಾಮದಿಂದ ಹಿಡಿದು ಹೊತ್ತಾರೆ ತನಕ ನಾಟಕವನ್ನು ನೋಡಿದ ಜನ ಭಾವಪೂರ್ಣವಾದ ಪರಿವರ್ತನೆಗೊಳಗಾಗುತ್ತಿದ್ದರು. ನಿರಕ್ಷರಕುಕ್ಷಿಗಳಿಗೂ ಈ ನಾಟಕ ಜೀವನ ಶಿಕ್ಷಣದ ಜೀವಂತ ಮಾಧ್ಯಮವಾಗಿತ್ತು. ಇದರಿಂದ ಪ್ರಭಾವಿತರಾಗಿ ಅದೆಷ್ಟೋ ಮಂದಿ ಪರಿವರ್ತಿತರಾಗಿದ್ದಾರೆ. ಪರಸ್ಪರ ಆತ್ಮೀಯರಾಗಿ ಬಾಳ್ವೆ ಮಾಡುತ್ತಿದ್ದಾರೆ. ಅನೇಕ ಮಂದಿ ಕುಡಿತಾದಿ ದುಶ್ಚಟಗಳನ್ನು ತ್ಯಜಿಸಿದ್ದಾರೆ. ಹೀಗೆ ಅಂದಿನ ಆ ಕಾರ್ಯಕ್ರಮಗಳು ಯಾವತ್ತು

* ನಿವೃತ್ತ ಪ್ರಾಧ್ಯಾಪಕರು, 'ಮಧುಕೇಶ್ವರ ನಿಲಯ, ೫ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು.



ಜನಮಾನಸದಲ್ಲಿ ಹಚ್ಚ ಹಸಿರಾಗಿ ಉಳಿದುಕೊಂಡು ಬಂದಿವೆ. ಸದ್ಯಃಪ್ರರೋಹವಲ್ಲದಿದ್ದರೂ ಕಾಲಾಂತರದಲ್ಲಿ ಮೊಳೆಯುವಂಥ ಸಂಸ್ಕಾರ ಬೀಜವನ್ನು ಜನಮನೋಭೂಮಿಯಲ್ಲಿ ಈ ಯೋಜನೆ ಬಿತ್ತಿದೆಂಬುದಂತೂ ಸತ್ಯ. ಭವಭೂತಿ ಮಹಾಕವಿ ಹೇಳುವಂತೆ "ಕಾಲೋऽಯಂ ನಿರವಧಿಃ ವಿಪುಲಾಚ ಪೃಥ್ವೀ" ಅಲ್ಲವೇ?

ಈ ಯೋಜನೆಯಿಂದ ಸಮಾಜ ಸುಧಾರಣೆಯ ಜೊತೆಗೆ ಶ್ರೀಮಠಕ್ಕೂ ಕಿಂಚಿತ್ತು ಪ್ರಯೋಜನವುಂಟಾಯಿತು. ಶ್ರೀಮಠದಲ್ಲಿ ತಿಳಿಗೇಡಿಗಳಿಂದ ಸೃಷ್ಟಿಯಾಗಿದ್ದ ಕೆಟ್ಟ ಪರಿಸ್ಥಿತಿಗೆ ನೈಜ ಕಾರಣವಾವುವೆಂಬುದನ್ನು ಜನತೆಗೆ ತಿಳಿ ಹೇಳುವ ಸಶಕ್ತ ಮಾಧ್ಯಮವಾಯಿತು. ಕದಡಿದ ಭಕ್ತ ಜನಮನವನ್ನು ತಿಳಿಗೊಳಿಸುವ, ಜನಮಾನಸದಲ್ಲಿ ಬಿತ್ತಿದ ವಿಷಬೀಜವನ್ನು ಕಿತ್ತೊಗೆಯುವ ದಿವ್ಯಸಾಧನವಾಯಿತು. ಗುರುಪರಂಪರೆಯ ಬಗ್ಗೆ, ಶ್ರೀಮಠದ ಬಗ್ಗೆ ಜನತೆಯಲ್ಲಿ ಉಳಿಸಿಕೊಂಡು ಬಂದಿದ್ದ ಸದಭಿಪ್ರಾಯ ಮತ್ತು ಸದ್ಭಾವನೆಯನ್ನು ಗಟ್ಟಿಯಾಗಿ ಪುನರ್ ಸ್ಥಾಪಿಸುವಲ್ಲಿ ಯಶಸ್ವಿಯಾಯಿತು.

ಬಸವಧರ್ಮ ದಾಸೋಹದಲ್ಲಿ ಬಸವಣ್ಣನವರನ್ನು ಕುರಿತ ನಾಟಕ ಪ್ರದರ್ಶನವು ಸಶಕ್ತವಾದ ಮತ್ತು ಪರಿಣಾಮಕಾರಿಯಾದ ಮಾಧ್ಯಮ ಎಂಬುದನ್ನು ಮನಗಂಡ ಪರಮಪೂಜ್ಯರು ಒಂದು ಅಭಿನಯ ಕಲಾತಂಡವನ್ನು ರೂಪಿಸಿದರು.

ನಾಟಕವೆಂಬುದೊಂದು ಸಂಗೀತ ಮತ್ತು ಅಭಿನಯ ಪ್ರಧಾನವಾದ ಸಂಕೀರ್ಣ ಕಲೆ. ಆದ್ದರಿಂದಲೇ ಅದು ರಮ್ಯ ಮತ್ತು ಬೋಧನಾ ಮಾಧ್ಯಮವಾಗಿದೆ. ಅಭಿನಯವು ಆಂಗಿಕಾಭಿನಯ, ವಾಚಿಕಾಭಿನಯ, ಆಹಾರ್ಯಾಭಿನಯ ಹಾಗೂ ಸಾತ್ವಿಕಾಭಿನಯವೆಂಬುದಾಗಿ ಚತುರ್ವಿಧ. ನಮ್ಮ ನಾಟಕದಲ್ಲಿ ಆಹಾರ್ಯಾಭಿನಯವು (ವೇಷ ಭೂಷಣಾದಿಗಳು) ಬೆಳಕು–ಧ್ವನಿಯ ಸಂಯೋಜನೆ, ಆಂಗಿಕಾಭಿನಯ ಮತ್ತು ವಾಚಿಕಾಭಿನಯ ಮೂಲಪಾತ್ರಗಳ ಗುಣಧರ್ಮಗಳ ಆರೋಪ ಹಾಗೂ ಅಭಿನಿವೇಶ ಇವುಗಳಿಂದ ಸಭ್ಯ ಸಾಮಾಜಿಕ ಪ್ರೇಕ್ಷಕನ ಹೃದಯದಲ್ಲಿ ರಸಾನುಭೂತಿಯ ಸ್ಪರ್ಶ ಉಂಟಾಗುತ್ತದೆ. ನಾಟಕದ ಸಂಭಾಷಣೆಯ ಶೈಲಿಯೇ ಬೇರೆ. ಇತರ ಸಾಹಿತ್ಯಪ್ರಕಾರದ ಬಂಧವೇ ಬೇರೆ. ಅಂದಿನ ಕಾಲಮಾನದಲ್ಲಿ ಗುಬ್ಬಿ ನಾಟಕ ಕಂಪನಿಗೆ ನಾಟಕಗಳನ್ನು ಬರೆದುಕೊಡುತ್ತಿದ್ದ ಬೆಳ್ಳಾವಿ ನರಹರಿ ಶಾಸ್ತ್ರಿಗಳು ಹಾಗೂ ನಂತರದ ಅ.ನ. ಕೃಷ್ಣರಾಯರು ರಚಿಸಿದ ನಾಟಕದಲ್ಲಿ ಆ ರೀತಿಯಾದ ಶೈಲಿಯಿದೆ. ಮುಂದೆ ಇತಿವೃತ್ತದ ವಿಸ್ತರಣೆ ಹಾಗೂ ಬದಲಾವಣೆಗಳು ನಾಟಕದ ಶೈಲಿಯಲ್ಲಿಯೇ ಇದ್ದಿದ್ದರೆ ಪರಿಣಾಮಕಾರಿಯಾಗಿರುತ್ತಿತ್ತು. ಇವೆಲ್ಲದರ ಅಭಾವವಿದ್ದರೂ ಪ್ರೇಕ್ಷಕರು ಟಿ.ವಿ. ಯ ಮಾಯಾಕರ್ಷಣೆಗೆ ಒಳಗಾಗಿದ್ದರೂ ನಾಟಕ ನೋಡಲು ಇಂದಿಗೂ ಸಹಸ್ರಸಹಸ್ರ ಸಂಖ್ಯೆಯಲ್ಲಿ ಕಲೆಯುವರೆಂದರೆ ಅದಕ್ಕೆ ಬಸವಣ್ಣನವರ ಮತ್ತು ಪರಮಪೂಜ್ಯರ ಮೇಲಿನ ಭಕ್ತಿಯು ಕಾರಣವೇ ಹೊರತು ಮತ್ತೇನೂ ಅಲ್ಲ!

**ಕೊನೆಯ ಮಾತು** : ಮಹಾಶಿವಯೋಗಿಯ ಶಿವಯೋಗ ಸಂದರ್ಭದಲ್ಲಿ ಜನ್ಮ ತಳೆದ ಈ ಬಸವ ದಾಸೋಹ ಯೋಜನೆ ಸ್ಥಾವರವಾಗದೆ, ಜಂಗಮವಾಗಿದೆ. ಶ್ರೀಮಠದ ಗುರುಪರಂಪರೆಯ ವಿಶೇಷ ನಡವಳಿಕೆಗಳಾದ ಅನ್ನದಾಸೋಹ, ಅಕ್ಷರದಾಸೋಹ, ಆಸರೆ ದಾಸೋಹ, ಅಭಯ ದಾಸೋಹಗಳು (ಭವರೋಗ ಪರಿಹಾರ) ಹೇಗೆ ನಿರಂತರವಾಗಿ ಊನವಿಲ್ಲದೆ ನಡೆಯುತ್ತಿವೆಯೋ ಅವುಗಳ ಜೊತೆಗೆ ಈ ಬಸವಧರ್ಮದ ದಾಸೋಹವೂ ಸೇರಿ ಶ್ರೀಮಠವು ಯಾವತ್ತೂ ಪಂಚವಿಧ ದಾಸೋಹಕೇಂದ್ರವಾಗಿದೆ ಎಂಬುದು ನನ್ನ ಮಾತ್ರವಲ್ಲ ಎಲ್ಲ ಸದ್ಭಕ್ತರ ಆಶಯವಾಗಿರುತ್ತದೆ.

ಪರಮಪೂಜ್ಯರ ನೇತೃತ್ವ ಹಾಗೂ ಪೂರ್ಣ ಉಪಸ್ಥಿತಿಯಲ್ಲಿ ಈ ಬಸವತತ್ತ್ವಪ್ರಸಾರ ಮತ್ತು ಬಸವೇಶ್ವರ ನಾಟಕಪ್ರದರ್ಶನ ಕೇವಲ ಕರ್ನಾಟಕದಲ್ಲಿ ಮಾತ್ರವಲ್ಲ ನೆರೆಯ ಆಂಧ್ರಪ್ರದೇಶ, ತಮಿಳುನಾಡು, ಮಹಾರಾಷ್ಟ್ರ ರಾಜ್ಯಗಳಲ್ಲಿ ೧೫೫೦ಕ್ಕೂ ಹೆಚ್ಚು ಗ್ರಾಮಗಳಲ್ಲಿ ನಡೆದು ದಾಖಲೆಯನ್ನು ನಿರ್ಮಿಸಿರುವುದು ಸಾಮಾನ್ಯ ಸಂಗತಿಯೇ? **ಆ ಮಹಾಶಿವಯೋಗಿಯ ಸಂಕಲ್ಪ ಹಾಗೂ ಸದ್ಭಕ್ತರ ಹಾರೈಕೆಯಲ್ಲಿ ಲೋಕ ಕಲ್ಯಾಣವಡಗಿದೆಯಲ್ಲವೇ?**





ನೆನಪಿನಾಳದಿಂದ

# ಮಾತೃತ್ವಕ್ಕೆ ಮಹತ್ವ ತಂದು ಮಹಂತರಾದ ಶ್ರೀ ಶಿವಕುಮಾರ ಮಹಾಶಿವಯೋಗಿಗಳು

– ಬಿ.ಎಂ. ಪರಮೇಶ್ವರಪ್ಪ *

(ಕಳೆದ ಸಂಚಿಕೆಯಿಂದ...)

**ಮಾಲ್ದಿಗೆ ತಿನ್ನಲು ತುಪ್ಪ ಕೊಡಿಸಿದ್ದು :**

ಹಳೆ ವಿದ್ಯಾರ್ಥಿಗಳೆಲ್ಲ ಕೂಡಿ ೧೯೭೨ರಲ್ಲಿ ರಜತಮಹೋತ್ಸವ ಆಚರಿಸಲು ನಿರ್ಣಯಿಸಿ ವ್ಯವಸ್ಥೆಯಾಯಿತು. ಪ್ರಸಾದಕ್ಕೆ ಕಿಂಚಿತ್ ಕೊರತೆಯಾಗದಂತೆ ಅಗತ್ಯತೆಗಿಂತ ಹೆಚ್ಚು ಮಾಲ್ದಿ ಮಾಡಿಸುವುದು ಅವರ ನಿತ್ಯದ ನಡೆ. ಆ ಕಾಲದಲ್ಲಿ ಸಿಹಿಬೂಂದಿ ಮಾಡಿಸುವುದು ದುಸ್ತರವಾಗಿತ್ತು. ಕಾರ್ಯ ಮುಗಿದ ನಂತರವೂ ಮಾಲ್ದಿ ಉಳಿಯಬೇಕು. ೨-೩ ಬಾರಿಯಾದರೂ ಮಕ್ಕಳು ಉಂಡು ಸಂತೋಷಪಡಬೇಕೆಂಬ ಸದಾಶಯದ ಬಯಕೆಯಿಂದ ಪೂಜ್ಯರಿಗೆ ಆಗುವ ಆನಂದ ವರ್ಣಿಸಲಾಗದು. ಕೆಲವು ಹುಡುಗರು ಉಗ್ರಾಣದ ವ್ಯವಸ್ಥಾಪಕರಿಗೆ ತಕ್ಷಣಕ್ಕೆ ಗೊತ್ತಾಗದಂತೆ ತುಡುಗು ಮಾಡಿ ಕೊಂಡೊಯ್ದರು. ತದನಂತರ ವಿಚಾರ ತಿಳಿದ ವ್ಯವಸ್ಥಾಪಕರು ಪೂಜ್ಯರಲ್ಲಿ ಸವಿಸ್ತಾರವಾಗಿ ತಿಳಿಸಿದರು. ಎಲ್ಲಿದೆ ತೋರಿಸು. ತಕ್ಷಣ ಹುಡುಗರ ಕೋಣೆಗೆ ಕರೆದುಕೊಂಡು ಹೋದರು. ಈಗಿನಂತೆ ಕೈಚೀಲ ದೊರೆಯುವುದು ಕಷ್ಟವಾಗಿತ್ತು. ಹುಡುಗರು ತಮ್ಮ ಪೈಜಾಮದ ತೋಳುಗಳಿಗೆ ಕೆಳಗೆ ಉರಿಕಟ್ಟಿ ಅದರಲ್ಲಿ ಮಾಲ್ದಿ ತುಂಬಿ ಇಟ್ಟುಕೊಂಡಿದ್ದರು. ಸಂಗ್ರಹಿಸಿದ ರೀತಿಯಿಂದ ಮಕ್ಕಳ ಬುದ್ಧಿವಂತಿಕೆ ನೋಡಿ ಆಶ್ಚರ್ಯವಾದರೂ ವ್ಯಕ್ತಪಡಿಸಿದೆ ಕೇಳಿದ್ದು ಹೀಗೆ 'ಹೇಗೆ ತಂದಿರಿ?' ಪೂಜ್ಯರ ಪ್ರಶ್ನೆಗೆ 'ಯಾಮಾರಿಸಿ ತಂದೆವು' ಹುಡುಗರ ಉತ್ತರ. 'ನೀವು ಅನುಸರಿಸಿದ ಮಾರ್ಗ ಸರಿಯೇ?' ಮಕ್ಕಳಿಂದ ಉತ್ತರವಿಲ್ಲ. ಪೂಜ್ಯರು ಮುಂದುವರಿದು 'ಹೇಗೆ ತಿನ್ನುತ್ತೀರಿ? ನೀರು ಹಾಕಿಕೊಂಡು ತಿನ್ನುತ್ತೀವಿ. ಹೀಗೆ ತಿನ್ನುವುದರಿಂದ ಚೆನ್ನಾಗಿರುತ್ತಾ. ಹೌದು ಬುದ್ಧಿ. ಕೂಡಲೇ ಪೂಜ್ಯರು ನೀರು ಹಾಕಿಕೊಂಡು ತಿಂದರೆ ಅಷ್ಟು ರುಚಿಯಾಗಿರುವುದಿಲ್ಲ. ತುಪ್ಪಹಾಕಿಕೊಂಡು ತಿನ್ನಬೇಕು. ಮಕ್ಕಳ ಮಾತು ಮೌನಕ್ಕೆ ಜಾರಿತು. ಕೂಡಲೇ ಪೂಜ್ಯರು ವ್ಯವಸ್ಥಾಪಕರಿಗೆ ಅಪ್ಪಣೆ ಮಾಡಿದ್ದು ಹೀಗೆ. ಈ ಮಕ್ಕಳಿಗೆ ಒಂದು ಚರಿಗೆ(ತಂಬಿಗೆ) ತುಪ್ಪ ಕೊಡು. ಮಕ್ಕಳು ತುಡುಗು ಮಾಡಿ ತಂದಿರುವುದು ಆಸೆಯಿಂದ. ತಿಂದು ಸಂತೋಷಪಡಲಿ ಎಂದರು. ಇದು ವ್ಯವಸ್ಥಾಪಕರಿಗೆ ನುಂಗಲಾರದ ತುತ್ತಾಯಿತು. ಇಷ್ಟು ನಡೆದರೂ ಒಂದು ವಾರದವರೆಗೆ ಮಕ್ಕಳಿಗೆ ತುಪ್ಪ ಕೊಡಲಿಲ್ಲ. ಮಕ್ಕಳು ಧೈರ್ಯಮಾಡಿ ಪೂಜ್ಯರಲ್ಲಿ ಹೋಗಿ ತುಪ್ಪ ಕೊಡದಿರುವುದನ್ನು ತಿಳಿಸಿದರು. ಕೂಡಲೇ ಕರೆಯಿಸಿದರು. ವ್ಯವಸ್ಥಾಪಕರಿಗೆ ಪ್ರಶ್ನೆ ಹಾಕಿದ್ದು ಹೀಗೆ ಯಾಕೆ ಕೊಡಲಿಲ್ಲ? ಯಾಕೆ ಕೊಡಲಿಲ್ಲ? ಅವರಿಂದ ಮೌನವೇ ಉತ್ತರವಾಗಿತ್ತು. ಕೂಡಲೇ ಪೂಜ್ಯರು ಈಗಲೇ ತುಪ್ಪ ಕೊಡುವುದು ಎಂದು ಅಪ್ಪಣೆ ಮಾಡಿ ಮಕ್ಕಳನ್ನು ಕುರಿತು ನೋಡಿ ತುಪ್ಪ ತಂದು ತೋರಿಸಿಹೋಗಬೇಕು. ಪೂಜ್ಯರ ಮಹತ್ವದ ನಡೆಯಿಂದ ಮಕ್ಕಳು ತುಪ್ಪ ಪಡೆದು ಮಾಲ್ದಿ ತಿಂದು ಸಂತೃಪ್ತಿ ಪಟ್ಟಿದ್ದರು. ಪೂಜ್ಯರ ನಡೆ ನಿಜಕ್ಕೂ ವರ್ಣಿಸಲಸಾಧ್ಯವಾಗಿತ್ತು. ಕಲ್ಪನೆಗೆ ಮೀರಿದಾಗಿತ್ತು. ಪೂಜ್ಯರ ದಾಸೋಹಂಭಾವದ (ನಾನು ದಾಸ ಸ್ವೀಕರಿಸುವರು ಒಡೆಯರು ಶಿವಸ್ವರೂಪಿಗಳು) ನಡೆ ಮಾನವತೆಗೆ ಮೀರಿದ್ದಾಗಿ ಮಾತೃತ್ವಕ್ಕೆ ಅಪವಾದವಾಗದಂತೆ ನಡೆದು ಆದರ್ಶರಾಗಿದ್ದರು.

**ತಕ್ಷಣ ಚಿಕಿತ್ಸೆ ಕೊಡಿಸಿದ್ದು :**

೧೯೭೨ ಅಕ್ಟೋಬರ್ ತಿಂಗಳ ಘಟನೆ. ಮಾರ್ಕಂಡೇಯ ನಿಲಯದ ೧ನೇ ರೂಮಿನಲ್ಲಿ ಪೂಜ್ಯರು ಪವಡಿಸುತ್ತಿದ್ದರು. ಉಳಿದ ಎಲ್ಲಾ ರೂಮುಗಳಲ್ಲಿ ಎಸ್‌ಎಸ್‌ಎಲ್‌ಸಿ ವಿದ್ಯಾರ್ಥಿಗಳು ನಮಗೆ ೩ನೇ ರೂಮಿನಲ್ಲಿ ವಸತಿಗೆ ಅವಕಾಶವಿತ್ತು. ೫ನೇ ರೂಮಿನಲ್ಲಿದ್ದ ನಮ್ಮ ಸಹಪಾಠಿ ಒಬ್ಬನು (ಹೆಸರು ಬೇಡ) ಆರೋಗ್ಯದ ತೊಂದರೆಯಿಂದ ನರಳಿ ೩ ದಿವಸಗಳ ಕಾಲ ಶಾಲೆ ತಪ್ಪಿಸಿಕೊಂಡ. ಅಂದರೆ ತೀವ್ರವಾದ ಕಾಯಿಲೆ. ನಾವು ೩ ಜನ ಹೋಗಿ ಏನಾಗಿದೆ ಎಂದು ಕೇಳಿದರು. ಉತ್ತರಿಸಲಿಲ್ಲ.

* ವಿಶ್ರಾಂತ ಕಾರ್ಯಪಾಲಕ ಅಭಿಯಂತರ, ಬಾಸೂರು, ಕಡೂರು ತಾ. ಚಿಕ್ಕಮಗಳೂರು ಜಿಲ್ಲೆ.





ಪೂಜ್ಯರು ಪವಡಿಸುವ ಕೋಣೆಗೆ ರಾತ್ರಿ ೧೦ ಗಂಟೆಗೆ ಬರುತ್ತಿದ್ದರು. ಅವನ ನರಳಾಟ ನೋಡಲಾಗದೆ ಪೂಜ್ಯರಲ್ಲಿ ೩ ಜನ ಹೋಗಿ ಸವಿಸ್ತಾರವಾಗಿ ೩ ದಿವಸಗಳಿಂದ ನೋವು ಅನುಭವಿಸುತ್ತಿದ್ದಾನೆ. ಕೇಳಿದರೆ ನಮಗೆ ಹೇಳುತ್ತಿಲ್ಲ ಎಂದೆವು. ತಕ್ಷಣ ನೀವು ಹೋಗಿ ಕರೆದುಕೊಂಡು ಬನ್ನಿ ಎಂದರು. ಅವನು ಬರುವುದಕ್ಕೆ ಮಜುಗರಪಟ್ಟಿದ್ದ. ಇಲ್ಲ ಪೂಜ್ಯರ ಅಪ್ಪಣೆಯಾಗಿದೆ ಎಂದು ಒತ್ತಾಯ ಮಾಡಿ ಎತ್ತಿಕೊಂಡು ಬಂದೆವು. ತಕ್ಷಣ ಅವನನ್ನು ವಿಚಾರಿಸಿದರು. ಪೂಜ್ಯರಿಗೆ ಉತ್ತರ ಕೊಡಲಿಲ್ಲ. ಪೂಜ್ಯರು ಸೂಕ್ಷ್ಮಮತಿಗಳಾದ ಕಾರಣ ನಮ್ಮಗಳನ್ನು ಹೊರಗೆ ಕಳಿಸಿ ಡ್ರೈವರ್ ಶಿವಣ್ಣ ಎಂಬುವವರನ್ನು ಕರೆಸಿ ತಡಮಾಡದೆ ತುಮಕೂರು ಸರ್ಕಾರಿ ಆಸ್ಪತ್ರೆಗೆ ಸೇರಿಸಿ ಚಿಕಿತ್ಸೆ ಕೊಡಿಸಿದರು. ೪ ದಿವಸಗಳ ಚಿಕಿತ್ಸೆಯ ನಂತರ ಆರಾಮಾಗಿ ಆಸ್ಪತ್ರೆಯಿಂದ ಬಿಡುಗಡೆಯಾಗಿ ಬಂದ. ನಾವುಗಳು ಒತ್ತಾಯ ಮಾಡಿ ನಮ್ಮನ್ನು ರೂಮಿನಿಂದ ಹೊರಗೆ ಕಳಿಸಿದ್ದು ಏಕೆ ತಿಳಿಸು ಎಂದೆವು. ಅವನು ಹೇಳಿದ್ದು ಹೀಗೆ. ನೋಡಿ ನನಗೆ ವೃಷಣದ ತೊಂದರೆಯಾಗಿ ಬಾವು ಬಂದು ನೋವು ತಡೆಯಲು ಆಗುತ್ತಿರಲಿಲ್ಲ. ಪೂಜ್ಯರು ನನ್ನ ಚಡ್ಡಿಯನ್ನು ಬಿಚ್ಚಿಸಿ ವೃಷಣವನ್ನು ನೋಡಿ ಕೈಯಲ್ಲಿ ಹಿಡಿದು ಒತ್ತಿದರು. ಆಗ ನೋವು ತಡೆಯಲಾಗಲಿಲ್ಲ. ತಕ್ಷಣ ಚಿಕಿತ್ಸೆಗೆ ವ್ಯವಸ್ಥೆ ಮಾಡಿದ್ದು ನಿಮಗೆ ಗೊತ್ತು ಎಂದನು. ಬಹುಶಃ ಯಾವ ತಂದೆತಾಯಂದಿರು ಸಹಾ ಈ ಮಟ್ಟದಲ್ಲಿ ಪರೀಕ್ಷಿಸುವುದು ಸಾಧ್ಯವಿಲ್ಲ ಅಲ್ಲವೇ? ಆದರೆ ಒಬ್ಬ ಸಂನ್ಯಾಸಿ ಇಷ್ಟು ಎತ್ತರಕ್ಕೆ ಹೋಗಿ ನಡೆದುಕೊಳ್ಳುವುದು ದುರ್ಲಭವಲ್ಲವೇ?

**ಕಳ್ಳನಿಗೆ ಕ್ಷಮಿಸಿ ಊಟ ಮಾಡಿಸಿದ್ದು :**

೧೯೭೦ರ ದಶಕದ ಘಟನೆ. ಅಂದಿನ ದಿನಗಳಲ್ಲಿ ಬೋರಿನಿಂದ/ಬಾವಿಯಿಂದ ತೋಟಕ್ಕೆ ನೀರು ಹಾಯಿಸಲು ಜಿಐ ಪೈಪು ಬಳಸುತ್ತಿದ್ದ ಕಾಲ. ಶ್ರೀಮಠದ ತೆಂಗಿನತೋಟದಲ್ಲಿ ಜಿಐ ಪೈಪು ತುಂಡುಗಳನ್ನು ಒಬ್ಬ ಕಳ್ಳತನ ಮಾಡಿ ಹುಡುಗರ ಕೈಗೆ ಸಿಕ್ಕಿಕೊಂಡ. ಪೂಜ್ಯರು ಕಾರ್ಯಕ್ರಮದ ನಿಮಿತ್ತ ಬೇರೆ ಊರಿಗೆ ಹೋಗಿದ್ದರು. ಕಳ್ಳನನ್ನು ಕಂಬಕ್ಕೆ ಕಟ್ಟಿ ಚೆನ್ನಾಗಿ ಹೊಡೆದರು. ಕಾರ್ಯಕ್ರಮ ಮುಗಿಸಿಕೊಂಡು ಪೂಜ್ಯರು ಬಂದಾಗಲೂ ಅವನನ್ನು ಕಂಬದಿಂದ ಬಿಟ್ಟಿರಲಿಲ್ಲ. ಅವನ ಅವಸ್ಥೆಯನ್ನು ನೋಡಿದ ಪೂಜ್ಯರಿಗೆ ಮನಸ್ಸು ತಲ್ಲಣಗೊಂಡಿತ್ತು. ಹೃದಯ ಮಿಡಿಯಿತು. ತಕ್ಷಣವೇ ಕಂಬದಿಂದ ಬಿಡುಗಡೆಗೊಳಿಸಿ ನೀವುಗಳು ಎಷ್ಟು ನಿರ್ದಯಿಗಳು, ಕಳ್ಳತನ ಮಾಡಿದನೆಂದು ಇಷ್ಟೊಂದು ಅಮಾನವೀಯವಾಗಿ ಹಿಂಸಿಸುವುದೇ? ಉಗ್ರಾಣದ ವ್ಯವಸ್ಥಾಪಕರನ್ನು ಕರೆಸಿ ಮೊದಲು ಈತನಿಗೆ ಊಟಮಾಡಿಸಿ ನಂತರ ಕಛೇರಿಗೆ ಕರೆದುಕೊಂಡು ಬರಲು ಅಪ್ಪಣೆ ಮಾಡಿದರು. ಅವನು ಬರುವವರೆಗೆ ಕಛೇರಿಯಲ್ಲಿ ಕುಳಿತು ಕಾಯುತ್ತಿದ್ದರು. ಅವನನ್ನು ಕರೆದುಕೊಂಡು ಬಂದರು. ಅವನು ಪ್ರಸಾದ ಸ್ವೀಕರಿಸಿದ ನಂತರ ಪೂಜ್ಯರಿಗೆ ಸ್ವಲ್ಪ ಸಮಾಧಾನವಾಗಿತ್ತು. ಅವನನ್ನು ಕೇಳಿದರು. ಹೀಗೇಕೆ ಮಾಡಿದೆ? ಅವನ ಉತ್ತರ ಎರಡು ದಿವಸಗಳಿಂದ ಊಟ ದೊರೆಯದೆ ತೊಂದರೆಯಾಗಿತ್ತು. ಅನ್ಯಮಾರ್ಗವಿಲ್ಲದೆ ಕಳ್ಳತನ ಮಾಡಲು ಯೋಚಿಸಿ ಪ್ರವೃತ್ತನಾದೆ. ಇದನ್ನು ಕೇಳಿದ ತಕ್ಷಣ ಪೂಜ್ಯರ ಮನಸ್ಸು ಮರುಗಿತು. ಪೈಪುತುಂಡುಗಳನ್ನು ತೆಗೆದುಕೊಂಡು ಹೋಗು ಎಂದು ಅಪ್ಪಣೆ ಮಾಡಿದರು. ತಕ್ಷಣ ಅವನ ಕಣ್ಣಲ್ಲಿ ಧಾರಾಕಾರವಾಗಿ ನೀರು ಸುರಿಯಿತು. ಪೂಜ್ಯರ ಮಾತನ್ನು ಕೇಳಿ ಅವನು ಸೋತಿದ್ದ ತಕ್ಷಣ ಪಾದಹಿಡಿದು **'ಬುದ್ಧಿ ಇನ್ನು ಮುಂದೆ ನಾನು ಕಳ್ಳತನ ಮಾಡುವುದಿಲ್ಲ. ಈ ಪೈಪುಗಳು ಬೇಡ. ಇನ್ನು ಮುಂದೆ ಯಾವುದೇ ಸಂದರ್ಭದಲ್ಲೂ ಯಾವುದೇ ಕೆಟ್ಟ ಕೆಲಸಕ್ಕೆ ಕೈಹಾಕುವುದಿಲ್ಲ'** ಎಂದು ಗಳಗಳನೆ ಅತ್ತುಬಿಟ್ಟ. ಅದನ್ನು ಕೇಳಿ ಅವನ ವರ್ತನೆಯನ್ನು ನೋಡಿ ಮಾತು ಮೌನವಾಗಿತ್ತು. ಸ್ವಲ್ಪಕಾಲ ಕಣ್ಣುಮುಚ್ಚಿ ನಂತರ ಉಪಾಧ್ಯಾಯರನ್ನು ಕರೆಸಿ ಅವನನ್ನು ಕ್ಯಾತ್ಸಂದ್ರದವರೆಗೆ ಬಿಟ್ಟುಬರ್ರಿ ಎಂದು ಅವನ ಗಾಡಿ ಖರ್ಚಿಗೆ ಸ್ವಲ್ಪ ಹಣವನ್ನು ಕೊಟ್ಟರು. ನಂತರ ಅವನು ಪೂರ್ಣ ಬದಲಾವಣೆಯಾಗಿದ್ದ. 'If one become honest one scoundrel will be less' 'ಒಬ್ಬ ಪ್ರಾಮಾಣಿಕನಾದರೆ ಒಬ್ಬ ಪಟಿಂಗ ಕಡಿಮೆಯಾದಂತೆ' ಎನ್ನುವುದನ್ನು ಸಾಧಿಸಿದ್ದರು. ಆತ ಆಗಿದ್ದಾಂಗೆ ಮಠಕ್ಕೆ ಬಂದು ಒಂದೆರೆಡು ದಿವಸ ಇದ್ದು ತನ್ನ ಕೈಲಾದ ಕೆಲಸದಲ್ಲಿ ತೊಡಗಿಸಿಕೊಂಡು ಪರಿಪೂರ್ಣ ಮಾನವನಾಗಿ ಬದಲಾಗಿದ್ದು ೧೨ನೇ ಶತಮಾನದಲ್ಲಿ ಬಸವಣ್ಣನವರು ನಡೆದುಕೊಂಡಿದ್ದನ್ನು ಕೇಳಿದ್ದೇವೆ. ಆದರೆ ಅದನ್ನು ೨೦ನೇ ಶತಮಾನದಲ್ಲಿ ಪೂಜ್ಯರು ಆಚರಣೆಗೆ ತಂದು ಮಹಾಮಾನವತೆಗೆ ಗೌರವ ತಂದಿದ್ದರಲ್ಲವೇ? ನೀವೇ ಯೋಚಿಸಿ.







**ಸಂಸ್ಕಾರವಂತ ಶಿಷ್ಯರನ್ನು ಸೃಷ್ಟಿಸಿದ ಸಿದ್ಧಗಂಗೆಯ ಸಿದ್ಧರು:**

ಪೂಜ್ಯರು ಶ್ರೀಮಠದಲ್ಲಿ ಹಿಂದೆ ಓದಿದ ಈಗ ಓದುತ್ತಿರುವ ವಿದ್ಯಾರ್ಥಿಗಳನ್ನು ನೋಡುವ ದೃಷ್ಟಿಯೇ ವಿಶೇಷ. ಅವರನ್ನು ಪ್ರತ್ಯಕ್ಷ ದೈವಸ್ವರೂಪಿಗಳೆಂದು ಕಂಡವರು. ಅವರುಗಳ ಉತ್ತಮ ಬದುಕನ್ನು ನೋಡಿ ಸಂತಸಪಟ್ಟಿದ್ದಾರೆ. ಪೂಜ್ಯರ ೮೮ ವರ್ಷಗಳ ಮಹತ್ವದ ಪರಮ ದಾಸೋಹ ಜೀವನದಲ್ಲಿ ಮಕ್ಕಳಿಗೆ ಅಕ್ಕರೆಯಿಂದ ಪ್ರಸಾದ ನೀಡಿದ್ದಾರೆ. ಆಸರೆಗೆ ತೊಂದರೆಯಾಗದಂತೆ ನೋಡಿಕೊಂಡಿದ್ದಾರೆ. ಅಕ್ಷರ ದಾಸೋಹಕ್ಕೆ ಮಹತ್ವದ ಸ್ಥಾನ ನೀಡಿ, ಮಠದಲ್ಲಿ ಕಲಿತವರೆಲ್ಲರೂ ಅವರ ಕಾಲ ಮೇಲೆ ನಿಂತು ದುಡಿದುಣ್ಣುವ ಕಲೆಯನ್ನು ಕಲಿಸಿಕೊಟ್ಟಿದ್ದಾರೆ. ತನ್ಮೂಲಕ ಸಂಸ್ಕಾರವಂತ ಶಿಷ್ಯರನ್ನು ನಾಡಿಗೆ ನೀಡಿದ ಹೆಗ್ಗಳಿಕೆ ಪೂಜ್ಯರದು. ಈ ಕಾರಣದಿಂದಲೇ ಶ್ರೀಮಠದಲ್ಲಿ ಕಲಿತ ವಿದ್ಯಾರ್ಥಿಗಳಿಗೆ ಸಾರ್ವಜನಿಕ ಜೀವನದಲ್ಲಿ ವಿಶೇಷ ಸ್ಥಾನವಿರುವುದನ್ನು ಕಾಣಬಹುದಾಗಿದೆ. ಮಠದಲ್ಲಿ ಕಲಿತು ಹೋದ ವಿದ್ಯಾರ್ಥಿಗಳು ಬಹುತೇಕರು ಆರ್ಥಿಕವಾಗಿ ಬಡವರು, ಅದರಲ್ಲು ಉತ್ತರ ಕರ್ನಾಟಕ ಭಾಗದ ಜಿಲ್ಲೆಗಳಾದ ಬಳ್ಳಾರಿ, ರಾಯಚೂರು, ಬೀದರ್, ಗುಲ್ಬರ್ಗಾ, ಯಾದಗಿರಿ, ಕೊಪ್ಪಳ, ಗದಗ, ಬಿಜಾಪುರ, ಬಾಗಲಕೋಟೆ, ಹಾವೇರಿ, ಧಾರವಾಡ, ಬೆಳಗಾವಿ, ಈ ಜಿಲ್ಲೆಗಳಿಂದ ಬಂದವರಂತು ಅವರ ಊರುಗಳಲ್ಲಿ ಕನಿಷ್ಠ ಸೌಲಭ್ಯ ದಿಂದಲು ವಂಚಿತರಾದವರು. ಶ್ರೀಮಠದ ಸೇವಾಕಾರ್ಯ ದಿಂದ ಪ್ರಭಾವಿತರಾದ ಹಳೆಯ ವಿದ್ಯಾರ್ಥಿಗಳು ಆನಂತರದಲ್ಲಿ ಕಟ್ಟಿಕೊಂಡ ಹೃದಯವಂತಿಕೆಯ ಬದುಕನ್ನು ನೋಡಿದಾಗ ದಿಗ್ಭ್ರಮೆಯಾಗುತ್ತದೆ. ಶ್ರೀಮಠದ ಬಗ್ಗೆ ಇರುವ ಗೌರವ, ಪೂಜ್ಯರ ಬಗ್ಗೆ ಇರುವ ನಿಷ್ಕಲ್ಮಶ ಭಕ್ತಿಯನ್ನು ವರ್ಣಿಸಲಸಾಧ್ಯ. ಅಂತಹುಗಳಲ್ಲಿ ಓದುಗರ ಮಾಹಿತಿಗಾಗಿ ಕೆಲವನ್ನು ಇಲ್ಲಿ ಕೊಡಲಾಗಿದೆ.

(ಮುಂದುವರೆಯುವುದು)

## ದಾಸೋಹಕ್ಕೆ ೪ ಲಕ್ಷ ರೂ.ಗಳ ಕೊಡುಗೆ



ಪದ್ಮಭೂಷಣ, ಕರ್ನಾಟಕರತ್ನ, ಬಸವಶ್ರೀ ಪುರಸ್ಕೃತರೂ, ನಡೆದಾಡಿದ ದೇವರು, ನಮ್ಮೆಲ್ಲರ ಆರಾಧ್ಯದೈವ, ತ್ರಿವಿಧದಾಸೋಹಿಗಳೂ ಆದ ಪರಮಪೂಜ್ಯ ಡಾ. ಶ್ರೀ ಶ್ರೀ ಶ್ರೀ ಶಿವಕುಮಾರ ಮಹಾ ಶಿವಯೋಗಿಗಳ ೧೧೫ನೇ ಜಯಂತಿ ಹಾಗೂ ಗುರುವಂದನಾ ಮಹೋತ್ಸವದ ಪ್ರಯುಕ್ತ ಶ್ರೀನಗರದ ಗೆಳೆಯರ ಬಳಗದಿಂದ, ಶ್ರೀಮಠದ ದಾಸೋಹ ನಿಧಿಗೆ ೪,೦೦,೦೦೧/- (ರೂ. ನಾಲ್ಕು ಲಕ್ಷದ ಒಂದು ರೂಪಾಯಿಗಳು) ರೂಗಳ ಕಾಣಿಕೆಯನ್ನು ದಿನಾಂಕ ೩೦-೦೩-೨೦೨೨ ರಂದು ಪರಮಪ್ರಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರಿಗೆ ಸಮರ್ಪಿಸಲಾಯಿತು. ಈ ದಾಸೋಹನಿಧಿಗೆ ಸಹಕರಿಸಿದ ಮಾಜಿ ನಗರಸಭಾ ಸದಸ್ಯರಾದ ಶ್ರೀಯುತರಾದ ಬಸವರಾಜು ಡಿ.ಆರ್., ಸಿದ್ಧರಾಜು ಹೆಚ್.ಎಂ.ಟಿ., ಡಿ.ಆರ್. ಬಸವರಾಜು, ನಿ.ಶಿಕ್ಷಕರು, ಶಿವಪ್ರಕಾಶ್, ಎಜಾಜ್‌ಪಾಷಾ, ಮಹೋಹರ ಆರ್.ಎಸ್. ಶಿಕ್ಷಕರು, ಶಿವಮೂರ್ತಿ, ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್. ಆನಂದಪ್ಪ, ಶಿಕ್ಷಕರು, ಬಸವರಾಜು ಪಿ.ಎಚ್. ಶಿಕ್ಷಕರು, ಶ್ರೀಮತಿ ಲೀಲಾ ಸೋಮಶೇಖರಯ್ಯ ಕೆ.ಹೆಚ್. ಶಿಕ್ಷಕರು, ಬಾಲಾಜಿ, ರಾಜಣ್ಣ(ಲ್ಯಾಂಡ್ ಆರ್ಮಿ) ಶ್ರೀರಂಗಪ್ಪ. ಶ್ರೀಮತಿ ಜಗದಂಬ ಷಡಾಕ್ಷರಯ್ಯ, ಶ್ರೀ ಹನುಮಂತರಾವ್, ಮಣಿಕಂಠ ಮತ್ತು ಶ್ರೀನಗರದ ಗೆಳೆಯರ ಬಳಗದಿಂದ ದಾಸೋಹ ನಿಧಿಗೆ ಸಮರ್ಪಿಸಲಾಯಿತು.

ವರದಿ: ಡಿ.ಆರ್. ಬಸವರಾಜು, ಶ್ರೀನಗರ







**ಅಭಿನಂದನೆ**

# ಪ್ರತಿಷ್ಠಿತ ನಾಡೋಜ ಪ್ರಶಸ್ತಿಗೆ ಭಾಜನರಾದ ಡಾ. ಗೊ.ರು. ಚನ್ನಬಸಪ್ಪ ಅವರಿಗೆ ಅಭಿನಂದನೆ



ನಾಡಿನ ಹಿರಿಯ ಜಾನಪದ ವಿದ್ವಾಂಸರಾದ ಡಾ. ಗೊ.ರು. ಚನ್ನಬಸಪ್ಪ ಅವರು ಹಂಪಿ ಕನ್ನಡ ವಿಶ್ವವಿದ್ಯಾಲಯ ಕೊಡ ಮಾಡುವ ಪ್ರತಿಷ್ಠಿತ ನಾಡೋಜ ಪ್ರಶಸ್ತಿಗೆ ಭಾಜನರಾಗಿರುವುದಕ್ಕೆ 'ಸಿದ್ಧಗಂಗಾ' ಅಭಿನಂದನೆಗಳನ್ನು ಹಾಗೂ ಶುಭಾಶಯಗಳನ್ನು ಕೋರುತ್ತದೆ.

ಹಂಪಿ ಕನ್ನಡ ವಿಶ್ವವಿದ್ಯಾಲಯ ಏಪ್ರಿಲ್ ೧೨ ರಂದು ಏರ್ಪಡಿಸಿದ್ದ ಘಟಿಕೋತ್ಸವ ಸಮಾರಂಭದಲ್ಲಿ ಕರ್ನಾಟಕದ ಘನತೆವೆತ್ತ ರಾಜ್ಯಪಾಲರಾದ ಶ್ರೀ ಥಾವರ್‌ಚಂದ್ ಗೆಹಲೋತ ಅವರಿಂದ ಡಾ. ಗೊ.ರು.ಚ. ಅವರು ನಾಡೋಜ ಪ್ರಶಸ್ತಿಯನ್ನು ಸ್ವೀಕರಿಸಿದರು.

ಡಾ. ಗೊ.ರು.ಚ. ಅವರು ಸರ್ಕಾರಿ ಸೇವೆಯಿಂದ ನಿವೃತ್ತರಾದ ಮೇಲೆ ಕನ್ನಡ ಸಾಹಿತ್ಯ ಪರಿಷತ್ತು, ಜಾನಪದ ಅಕಾಡೆಮಿ, ಅಂಧರ ಕ್ಷೇಮಾಭಿವೃದ್ಧಿ ಸಂಸ್ಥೆ ಹಾಗೂ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ ದಕ್ಷತೆ, ಪ್ರಾಮಾಣಿಕತೆ, ನಿಸ್ವಾರ್ಥದಿಂದ ಅನನ್ಯ ಸೇವೆ ಸಲ್ಲಿಸಿ ಆಯಾ ಹುದ್ದೆಗಳಿಗೆ ಘನತೆ ಗೌರವವನ್ನು ತಂದುಕೊಟ್ಟ ಹೆಗ್ಗಳಿಕೆಗೆ ಪಾತ್ರರಾಗಿದ್ದಾರೆ. ಆಯಾ ಸಂಸ್ಥೆಗಳಲ್ಲಿ ತಮ್ಮದೇ ಆದ ಸಾಧನೆಯ ಹೆಜ್ಜೆಗುರುತುಗಳನ್ನು ಮೂಡಿಸಿ ಆಯಾ ಸಂಸ್ಥೆಗಳ ಇತಿಹಾಸದಲ್ಲಿ ದಾಖಲಾಗುವಂತೆ ಮಾಡಿದ್ದಾರೆ. ಜಾನಪದ, ಸಾಹಿತ್ಯ, ಸಾಂಸ್ಕೃತಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ತಮ್ಮನ್ನು ಸಮರ್ಪಿಸಿಕೊಂಡಿರುವ ಡಾ. ಗೊ.ರು.ಚ. ಅವರು ಪ್ರತಿಭೆ, ಸಂಘಟನೆ ಹಾಗೂ ಉತ್ತಮ ವಾಗ್ಮಿ ಈ ಮೂರರ ತ್ರಿವೇಣಿ ಸಂಗಮವಾಗಿದ್ದಾರೆ.

ಜಾನಪದ, ಸಾಹಿತ್ಯ ಹಾಗೂ ಭಾಷಾಂತರ ಕ್ಷೇತ್ರಕ್ಕೆ ಮೌಲಿಕ ಕೃತಿಗಳನ್ನು ನೀಡಿರುವ ಡಾ. ಗೊ.ರು.ಚ. ಅವರಿಗೆ ಅನೇಕ ಪ್ರತಿಷ್ಠಿತ ಪ್ರಶಸ್ತಿಗಳು ಸಂದಿವೆ. ಅವುಗಳಲ್ಲಿ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ, ಇಂಗ್ಲೆಂಡ್ ಕನ್ನಡ ಕೂಟ ಪ್ರಶಸ್ತಿ, ಬಸವ ವಿಭೂಷಣ ಪ್ರಶಸ್ತಿ, ನಾಟಕ ಅಕಾಡೆಮಿ ಪ್ರಶಸ್ತಿ, ಅಳ್ವಾಸ್ ನುಡಿಸಿರಿ ಪ್ರಶಸ್ತಿ, ಶಿವಕುಮಾರಶ್ರೀ ಪ್ರಶಸ್ತಿ, ಕೇಂದ್ರ ನಾಟಕ ಅಕಾಡೆಮಿ ಪ್ರಶಸ್ತಿ, ಜಾನಪದ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್, ರಾಷ್ಟ್ರೀಯ ಬಸವ ಪುರಸ್ಕಾರ ಪ್ರಶಸ್ತಿಯೂ ಸೇರಿದಂತೆ ಹಲವಾರು ಪ್ರಶಸ್ತಿಗಳಿಗೆ ಭಾಜನರಾಗಿದ್ದಾರೆ.

ಇದೇ ಮೇ ೧೮ಕ್ಕೆ ೯೨ ವಸಂತಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸವಿದು ೯೩ನೇ ವಸಂತಕ್ಕೆ ಪಾದಾರ್ಪಣೆ ಮಾಡುತ್ತಿರುವ ಈ ಶುಭಸಂದರ್ಭದಲ್ಲಿ ಡಾ. ಗೊ.ರು.ಚ. ಅವರಿಗೆ 'ಸಿದ್ಧಗಂಗಾ' ಹುಟ್ಟು ಹಬ್ಬದ ಹಾರ್ದಿಕ ಶುಭಾಶಯಗಳನ್ನು ಕೋರುತ್ತದೆ. ಅವರಿಂದ ನಾಡು-ನುಡಿಗೆ ಮತ್ತಷ್ಟು ಕಾಲ ಸೇವೆ ಸಲ್ಲಿಸುವಂತಾಗಲಿ ಎಂದು ಹಾರೈಸುತ್ತದೆ.

ಅಭಿನಂದನೆ

## ಬೆಂಗಳೂರು ಶಿವನಗರದ ಶ್ರೀ ಸಿದ್ಧಗಂಗಾ ಪ್ರೌಢಶಾಲೆಯ ವಿದ್ಯಾರ್ಥಿನಿ

# ಕುಮಾರಿ ನಿತ್ಯಶ್ರೀ NMMS ಪರೀಕ್ಷೆಯಲ್ಲಿ ಆಯ್ಕೆ

ರಾಜ್ಯ ಹಾಗೂ ಕೇಂದ್ರ ಸರ್ಕಾರಗಳ ಸಂಯುಕ್ತ ಆಶ್ರಯದಲ್ಲಿ ಪ್ರತಿವರ್ಷ ೮ನೇ ತರಗತಿ ವಿದ್ಯಾರ್ಥಿಗಳಿಗೆ ನಡೆಸುವ ನ್ಯಾಷನಲ್ ಮೀನ್ಸ್ ಕಮ್ ಮೆರಿಟ್ ವಿದ್ಯಾರ್ಥಿ ವೇತನ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಶಿವನಗರದ ಶ್ರೀ ಸಿದ್ಧಗಂಗಾ ಪ್ರೌಢಶಾಲೆಯ ವಿದ್ಯಾರ್ಥಿನಿ ಕುಮಾರಿ ನಿತ್ಯಶ್ರೀ ಆಯ್ಕೆಯಾಗಿ ಶಾಲೆಗೆ ಕೀರ್ತಿಯನ್ನು ತಂದಿರುವುದಕ್ಕೆ ಕುಮಾರಿ ನಿತ್ಯಶ್ರೀ ಹಾಗೂ ಮಾರ್ಗದರ್ಶನ ಮಾಡಿದ ಗಣಿತ ಶಿಕ್ಷಕರಾದ ಶ್ರೀ ಬಿ.ಆರ್. ಸದಾಶಿವಯ್ಯ ಅವರನ್ನು 'ಸಿದ್ಧಗಂಗಾ' ಅಭಿನಂದನೆಗಳನ್ನು ಸಲ್ಲಿಸುತ್ತದೆ ಹಾಗೂ ಶುಭಾಶಯಗಳನ್ನು ಕೋರುತ್ತದೆ.

ಸರ್ಕಾರಿ ಮತ್ತು ಅನುದಾನಿತ ಶಾಲೆಗಳಲ್ಲಿ ವ್ಯಾಸಂಗ ಮಾಡುತ್ತಿರುವ ಎಂಟನೇ ತರಗತಿ ವಿದ್ಯಾರ್ಥಿಗಳು ಈ ಸ್ಪರ್ಧೆಯಲ್ಲಿ ಭಾಗವಹಿಸಲು ಅರ್ಹತೆಯನ್ನು ಪಡೆದಿರುತ್ತಾರೆ. ವಿದ್ಯಾರ್ಥಿಗಳ ಪೋಷಕರ ವಾರ್ಷಿಕ ವರಮಾನ ೧.೫ ಲಕ್ಷ ರೂ.ಗಳು ಮೀರಿರಬಾರದು ಹಾಗೂ ಏಳನೇ ತರಗತಿಯಲ್ಲಿ ಸಾಮಾನ್ಯ ವರ್ಗದ ವಿದ್ಯಾರ್ಥಿಗಳು ಶೇ. ೫೫ ಹಾಗೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳು ಕನಿಷ್ಠ ಶೇ. ೫೦ ಅಂಕಗಳನ್ನು ಪಡೆದಿರಬೇಕು. ಈ ಪರೀಕ್ಷೆಯಲ್ಲಿ ಆಯ್ಕೆಯಾದ ಅರ್ಹ ವಿದ್ಯಾರ್ಥಿಗಳಿಗೆ ತಿಂಗಳಿಗೆ ಒಂದು ಸಾವಿರ ರೂ.ಗಳಂತೆ ೯, ೧೦, ೧೧ ಮತ್ತು ೧೨ನೇ ತರಗತಿಯವರೆಗೆ ನಾಲ್ಕು ವರ್ಷಗಳು ವಿದ್ಯಾರ್ಥಿ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ.

ಕುಮಾರಿ ನಿತ್ಯಶ್ರೀ GMAT ಪತ್ರಿಕೆಯಲ್ಲಿ ಬೆಂಗಳೂರು ಉತ್ತರ ವಲಯ-೧ ರಲ್ಲಿ ಮೊದಲನೇ ಸ್ಥಾನವನ್ನು ಹಾಗೂ ಬೆಂಗಳೂರು ಉತ್ತರ ಜಿಲ್ಲೆಗೆ ಮೂರನೇ ಸ್ಥಾನವನ್ನು ಪಡೆದು ಶಾಲೆಗೆ ಹಾಗೂ ಸಂಸ್ಥೆಗೆ ಕೀರ್ತಿಯನ್ನು ತಂದಿದ್ದಾರೆ. ಶಾಲೆಯಲ್ಲಿ ಆಕೆಗೆ ಸನ್ಮಾನ ಮಾಡಿದ ಸಂದರ್ಭದಲ್ಲಿ ಮಾತನಾಡಿದ ಶ್ರೀ ಬಿ.ಆರ್. ಸದಾಶಿವಯ್ಯ ಅವರು ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಾಶೀರ್ವಾದ, ಸಂಸ್ಥೆಯ ಆಡಳಿತ ಮಂಡಳಿ ಹಾಗೂ ಶಾಲೆಯ ಮುಖ್ಯ ಶಿಕ್ಷಕರಾದ ಶ್ರೀ ಬಿ.ಆರ್. ರಾಜಶೇಖರ್, ಪ್ರಾಥಮಿಕ ಶಾಲಾ ಮುಖ್ಯ ಶಿಕ್ಷಕಿಯಾದ ಶ್ರೀಮತಿ ಬಿ.ವಿ. ಕಾತ್ಯಾಯಿನಿ ಹಾಗೂ ಶಾಲೆಯ ಎಲ್ಲ ಸಿಬ್ಬಂದಿ ವರ್ಗದವರು ನೀಡಿದ ಸಹಕಾರವನ್ನು ಕೃತಜ್ಞತೆಯಿಂದ ಸ್ಮರಿಸಿದರು. ಮುಂದಿನ ವರ್ಷಗಳಲ್ಲಿ ಇನ್ನೂ ಹೆಚ್ಚಿನ ವಿದ್ಯಾರ್ಥಿಗಳಿಗೆ ಆಯ್ಕೆಯಾಗಲು ಶ್ರಮಿಸುವುದಾಗಿ ಹೇಳಿದರು.






ವಿದ್ಯಾರ್ಥಿನಿ ಕು|| ನಿತ್ಯಶ್ರೀ ಅವರೊಂದಿಗೆ ಗಣಿತ ಶಿಕ್ಷಕರಾದ ಶ್ರೀ ಬಿ.ಆರ್. ಸದಾಶಿವಯ್ಯ ಹಾಗೂ ಮುಖ್ಯ ಶಿಕ್ಷಕರಾದ ಶ್ರೀ ಬಿ.ಆರ್. ರಾಜಶೇಖರ್ ಹಾಗೂ ಪ್ರಾಥಮಿಕ ಶಾಲೆಯ ಮುಖ್ಯ ಶಿಕ್ಷಕಿಯಾದ ಶ್ರೀಮತಿ ಬಿ.ವಿ. ಕಾತ್ಯಾಯಿನಿ ಅವರು



ಲೇಖನ

# ನಡೆ-ನುಡಿಯೊಳಗೆ ಮತ್ತೊಂದು ಕಾಣದಂತಿರಬೇಕು

- ಸ.ರಾ. ಸುಳಕೂಡೆ *

ಜಗತ್ತು ದಾಖಲೆಯ ಯಶಸ್ಸು-ಶ್ರೇಯಸ್ಸು, ಪ್ರಗತಿ-ಪ್ರಯೋಗ, ಶಿಸ್ತು, ಸಡಗರದಂತೆ ಅಸ್ತವ್ಯಸ್ತ, ವಿಗತಿ, ವಿವಾದ, ಪ್ರಮಾದಗಳನ್ನು ಕಂಡಿದೆ. ಅಂದರೆ ಒಳಿತು-ಕೆಡಕುಗಳಿಂದ ಈ ಜಗತ್ತು ಕೂಡಿಕೊಂಡಿದೆ. ಒಳಿತು-ಕೆಡಕುಗಳನ್ನು ಗಮನಿಸುತ್ತ, ಗಮನಿಸುತ್ತ ಹೋದಂತೆ, ನಮ್ಮ ನಡೆ-ನುಡಿಗಳಲ್ಲಿಯ ಭಿನ್ನತೆಯನ್ನೇ ಬೆರಳು ಮಾಡಿ ತೋರಿಸುವ ಪ್ರಸಂಗವು ಎದುರಾಗುತ್ತದೆ. ಇಲ್ಲಿ ಮನುಷ್ಯ ತನ್ನ ಬದುಕಿಗಾಗಿ ಹಗಲು ವೇಷ ಹಾಕಿಕೊಂಡಿದ್ದು ಸತ್ಯನಾದರೆ, ಅನೇಕ ವೇಷಗಳನ್ನು ಕಳಚಿಕೊಂಡು, ಎಲ್ಲವನ್ನು ತೊರೆದು ನಿಂತ ಸತ್ಯವು ಗೋಚರಿಸದಿರದು. ಮನುಷ್ಯನು ತಿಳಿದೋ ತಿಳಿಯದೆಯೋ ಅಥವಾ ಭ್ರಮಿತನಾಗಿಯೂ ನಿತ್ಯ ಒಳಿತು ಕೆಡಕಿನ ದಡ ತಟ್ಟುತ್ತಲೇ ಇರುತ್ತಾನೆ.

ಮನುಷ್ಯನು ತನ್ನ ಸಹಚರರಿಗೆ ಸತ್ಯವಂತನೂ, ನೀತಿವಂತನೂ, ಅಹರ್ನಿಶಿಯಾಗಿ ವಿಶ್ವಾಸವುಳ್ಳವನಾಗಿಯೂ ತೋರಿಕೆಯೊಳಗಿದ್ದರೂ ಅವನ ಇರುವಿಕೆಯು ಸತ್ಯವನ್ನೇ ಮತ್ತು ಒಳಿತನ್ನೇ ಹೊಂದಿರುತ್ತದೆಂದು ಹೇಳಲಿಕ್ಕಾಗದು. ಅವನಿಗೆ ಗೊತ್ತು ಗೊತ್ತಿಲ್ಲದೆ ಅನೇಕ ಅವಾಂತರಗಳು, ವಿಸಂಗತಿಗಳು ಜರುಗಿ, ಹೀಗೇಕಾಯ್ತು ಎಂಬ ಸಂಧಿಗ್ಧತೆ ಒಳಗೊಳ್ಳುವಂತೆ ಮಾಡಿದ್ದು, ನಿತ್ಯದ ಮಾತಾಗಿದೆ. ಶರಣರು ನುಡಿಯಲ್ಲಿ ಜಾಣನಲ್ಲದೆ, ನಡೆಯಲ್ಲಿ ಜಾಣನಲ್ಲಯ್ಯ ಎಂಬ ವಿಮರ್ಶೆಯ ಸೂತ್ರವನ್ನು ಪಸರಿಸಿದ್ದು, ಸತ್ಯವೆಂಬುದು ಅಂತರಂಗ-ಬಹಿರಂಗಕ್ಕೂ ಸಂಬಂಧಿಸಿದೆಂದಿದ್ದಾರೆ. ಶರಣರು, ಸತ್ಯವು ಸಾಕಾರಗೊಂಡು ನಿಶಬ್ದಗೊಂಡಿರಬೇಕೆಂಬ ಅನುಭಾವ ಹಂಚಿಕೊಂಡಿದ್ದಾರೆ. ವಾಸ್ತವದೊಳಗೆ ಮನುಷ್ಯರೆಲ್ಲರೂ ಒಳ್ಳೆಯವರು, ಸತ್ಯವಂತರು, ವಿಶ್ವಾಸಿಕರೆಂದು ಹೇಳುತ್ತಲೂ, ಹಾಗೆ ನಂಬುವಂತೆ ಮಾಡುತ್ತಲೇ ಇರುತ್ತಾರೆ. ಆದರೆ ಅವರು ತಮ್ಮ ಗತ್ತುಗಾರಿಕೆಯನ್ನು ಬಿಟ್ಟುಕೊಡದೇ ತಮ್ಮ ಹಿತಾಸಕ್ತಿಯನ್ನು ಸಾಧಿಸುವ ಸೋಗನ್ನು ಚೆನ್ನಾಗಿಯೇ ನಿಭಾಯಿಸಿದ್ದು, ತಡವಾಗಿ ಗೊತ್ತಾಗುತ್ತದೆ. ಮೋಸಗಾರರು ಸವಿ ಸವಿಯಾದ ಮಾತುಗಳನ್ನಾಗಿ ನಂಬಿಸಿ ಇದ್ದುದೆಲ್ಲವನ್ನು ನಾಜೂಕಿನಿಂದ ಲಪಟಾಯಿಸಿದ್ದು, ಜಗ ಕಂಡ ಸತ್ಯವೇ ಆಗಿದೆ. ಬಂಗಾರ ಕಂಡರೂ ಕಣ್ಣೆತ್ತಿ ನೋಡುವವರು ನಾವಲ್ಲೆಂದು ಅದೆಷ್ಟೋ ಬಡಾಯಿ ಕೊಚ್ಚಿಕೊಳ್ಳುವವರು, ಗಾಜಿನ ಚೂರನ್ನು ಬಿಡುವ ಅಸಾಮಿಗಳೆಂದು ಜನ ಮಾತಾಡಿಕೊಳ್ಳುವಲ್ಲಿ, ಯಥಾರ್ಥತೆಯ ಮುನ್ನೋಟವಿದೆ. ಇದನ್ನೇ ಶರಣರು ಹೇಳುವುದೊಂದು, ಮಾಡುವುದು ಇನ್ನೊಂದೆಂದು ಸಮೀಕರಿಸಿದ್ದಾರೆ. ಧನ ದೊರಕದಿದ್ದರೆ ನಿಸ್ಪೃಹರಾಗಿ ಕಂಡವರನ್ನು ಜಗತ್ತು ಇಂದಿಗೂ ಚೆನ್ನಾಗಿಯೇ ಗುರುತಿಸಿದೆ. ಅಧಿಕಾರವಿಲ್ಲದಿದ್ದಾಗ ಜನರು, ಏನೇನೋ ಭಾಷೆ-ಭರವಸೆಗಳನ್ನು ಕೊಡುತ್ತ ನಂಬಿಸುತ್ತಾರೆ. ಅವರು ಅಧಿಕಾರಕ್ಕೆ ಬಂದಾಗ, ಅದಕ್ಕೆ ತದ್ವಿರುದ್ಧವಾಗಿ ನಡೆದುಕೊಳ್ಳುವುದು ನಿತ್ಯ ಕಂಡ ಸತ್ಯವಾಗಿದೆ. ಬಾಯಿ ಮಾತಿನೊಳಗೆ ಅಸಂಖ್ಯಾತರು ಪ್ರಾಮಾಣಿಕತೆಯ ಸೊಲ್ಲನ್ನು ಎತ್ತರಿಸಿಕೊಂಡರಿವುದೇ ಬಹಳಷ್ಟಿದೆ. ಅವರೆಲ್ಲರಲೂ ನಡೆಯೊಳಗೂ ಪ್ರಾಮಾಣಿಕರಾಗಿದ್ದರೆ, ಈ ಜಗದೊಳಗಿನ ಅಸಂಖ್ಯ ಗದ್ದಲ, ಗೊಂದಲ, ಅಪರಾಧ, ಹೊಡೆದಾಟ, ಕಾಳಗ, ಕದನಗಳೆಲ್ಲವೂ ಬಯಲಾಗಿ ಹೋಗಿರುತ್ತಿದ್ದವು. ಶರಣರು ಸತ್ಯ-ಶುದ್ಧ ಕಾಯಕದಿ ನಿರತಗೊಂಡು, ವೇಷಧಾರಿಗಳಾಗದೇ ಬದುಕಿದರಲ್ಲದೇ ಕೊಟ್ಟ ಮಾತು ತಪ್ಪದಂತೆಯೂ ಜಾಗೃತಿಯನ್ನು ವಹಿಸಿದ್ದು, ಮನನ ಯೋಗ್ಯವಾಗಿದೆ. ನಡೆ-ನುಡಿಯೊಳಗೆ ಎಳ್ಳಷ್ಟು ಅಂತರವಿರದಂತೆ ನೋಡಿಕೊಳ್ಳುವುದೆಂದರೆ, ಪ್ರಶಾಂತಿಯನ್ನು ಅಂತರಂಗ-ಬಹಿರಂಗದೊಳಗೆ ತಂದುಕೊಳ್ಳುವುದು ಮತ್ತು ಮಸಲತ್ತು-ಮೋಹ, ಚಾಲಾಕಿತನದಿಂದ ದೂರವಿರುವುದಾಗಿದೆ. ಹೀಗೆ ನಡೆದುಕೊಂಡಾಗ ಮಾನವೀಯ ವೈಭವ ತನ್ನಿಂದ ತಾನೆ ಕಂಗೊಳಿಸದೇ ಇರಲಾರದು.

ಕುಭಾಷೆ ಸುಭಾಷೆಯ ಕೇಳದಂತಿರಬೇಕು,
ಮೃದು ಕಠಿಣಂಗಳ ನಾರಯ್ಯದಂತಿರಬೇಕು,
ರಸಗಂಧಂಗಳ ಅರಿಯದಂತಿರಬೇಕು,
ಲಿಂಗವಲ್ಲದೇ ಮತ್ತೊಂದು ಕಾಣದಂತಿರಬೇಕು,
ಇಂದ್ರಿಯಂಗಳ ಬಳಿಸಂದಲ್ಲದೆ
ದೇವ ಸಕಳೇಶ್ವರ ದೇವನನೊಲಿಸಬಾರದು.

---

* # ೧೩೧೯, "ಶ್ರೀ ಶಿವಪ್ರಸಾದ" ರಾಮತೀರ್ಥನಗರ, ಬೆಳಗಾವಿ







ವಾಸ್ತವತೆಯನ್ನು ಅರ್ಥೈಸಿಕೊಂಡು ಬದುಕುವುದೆಂದರೆ ತಮ್ಮ-ತಮ್ಮ ಕುಚೇಷ್ಟೆಗಳನ್ನು ತಹಬಂದಿಗೆ ತಂದುಕೊಂಡು, ಇಂದ್ರಿಯಗಳನ್ನು ಹತೋಟಿಯೊಳಗಿಟ್ಟು ಸಹಜತೆಯೊಳಗೆ ಬದುಕುವ ರೀತಿಯೇ ಆಗಿದೆ. ಹೀಗಾದಲ್ಲಿ ನಡೆ-ನುಡಿಯ ಏಕತೆಯ ಬೆಳಕು ತುಂಬಿಕೊಂಡಿರುತ್ತದೆ. ಶರಣರು ಈ ಬದುಕು ಭವ್ಯ-ದಿವ್ಯಗೊಳ್ಳಲು ನಡೆ-ನುಡಿಯೊಳಗಿನ ಗೊಂದಲ ನಿವಾರಿಸಿಕೊಂಡಿರುವ ವಿಧಾನವು, ವೈಚಾರಿಕತೆಯ ನೆಲೆಯೊಳಗೂ ಸಿದ್ಧಿ ಹೊಂದಿದೆ. ಮಾನವೀಯ ಗುಣ ವಿಶೇಷತೆಯೊಳಗೆ ಸಮತೋಲನ ಕಾಯ್ದುಕೊಂಡಿರುವ ಶರಣರು, ಕುಭಾಷೆ-ಸುಭಾಷೆಯ ಕೇಳದಂತಿರಬೇಕು, ಮೃದು ಕಠಿಣಗಳ ಕಾಟಕ್ಕೆ ಒಳಗೊಳ್ಳದಂತಿರಬೇಕೆಂಬುದನ್ನು ಮನಗಂಡು ಮಾತಾಡಿ, ನಡೆದುಕೊಂಡಿದ್ದಾರೆ. ಬದುಕಿನೊಳಗೆ ಒಂದಿಲ್ಲೊಂದು ಒಳಿತು-ಕೆಡಕುಗಳು ಸಂಭವಿಸುತ್ತಲೇ ಇರುತ್ತವೆ. ಒಳಿತಿಗೆ ಹಿಗ್ಗಿ, ಕೆಡಕಿಗೆ ಕುಗ್ಗಿ ಬದುಕಿನ ಪಥವನ್ನು ಬಿಗಡಾಯಿಸಿಕೊಳ್ಳದಿರುವುದೇ ಬದುಕಿನ ದಿವ್ಯತೆಯ ಭಾಗವಾಗಿದೆ. ಎಲ್ಲಾ ಯಶಸ್ಸು ತನ್ನದೆಂದು, ಸೋಲಿಗೆಲ್ಲ ಪರರೆಂಬುದು ಲೋಕ ರೂಢಿಯೇ ಆಗಿದೆ. ಸೋಲು-ಗೆಲುವಿನ ಮಾತುಕತೆಗಳಾಚೆ ಬದುಕಿನ ಬೆಳಕಿದೆ, ಈ ಬೆಳಕಿನೊಳಗೆ ಬದುಕುವುದೆಂದರೆ ಶರಣರಂತಾಗುವುದೇ ಆಗಿದೆ.

ಬದುಕಿನ ಸಾರ-ಸತ್ವವೆಲ್ಲವೂ ಸತ್ಯದೊಳಗೆ ಸಮ್ಮಿಳಿತಗೊಂಡಿದೆ. ನಮ್ಮ ನಡಾವಳಿಗಳು ಸುಕೃತಗೊಳ್ಳಬೇಕಾದರೆ ಸಕಲದರೊಳಗೆ ಸತ್ಯವನ್ನೇ ಆಧರಿಸಿಕೊಂಡು, ಹೋಗಬೇಕಾಗುತ್ತದೆ. ಅನುಕೂಲಸಿಂಧುತ್ವ ಅಥವಾ ಲಾಭ-ನಷ್ಟದ ಲೆಕ್ಕಾಚಾರದಡಿ ಸತ್ಯವನ್ನು ಪರಿಪಾಲಿಸುವ ಮನೋಭಾವವು ಎಂದೂ ವ್ಯಕ್ತಿತ್ವಕ್ಕೆ ಭೂಷಣ ತಂದುಕೊಡಲಾರದು. ಸತ್ಯವನ್ನು ಪರಿಪಾಲಿಸುವ ನಡೆ-ನುಡಿಗಳನ್ನು ಹೊಂದುವುದೆಂದರೆ, ಸಂಯಮ-ಸುಶೀಲ ಬದುಕನ್ನು ಚಾಚು ತಪ್ಪದೆ ನಡೆಸಿಕೊಂಡು ಹೋಗುವುದಾಗಿದೆ, ಶರಣರು, ತಮ್ಮ ಬದುಕನ್ನು ಚಿತ್ತ ಚಂಚಾಲ್ಯತೆಗೆ ಒಳಗೊಳ್ಳದಂತೆ ನೋಡಿಕೊಂಡಿದ್ದರಿಂದಲೇ ಪರಧನ, ಪರಸತಿ, ಪಟ್ಟ-ಪದವಿ ಮುಂತಾದ ದುರಾಸೆಗಳಿಗೆ ಸೊಪ್ಪು ಹಾಕಲಿಲ್ಲ. ಅವರು ನುಡಿಯೊಳಗೆ ಸಾಧಿಸಿದ ಸಿದ್ಧಿಯನ್ನೇ ನಡೆಯನ್ನಾಗಿಸಿಕೊಂಡು ನಂಬಿದಂತೆ ನಡೆದುಕೊಂಡರು, ಬದುಕಿನ ಗೆಲುವನ್ನೇ ತುಂಬಿಕೊಂಡರು.

**ಕರ್ತನೊಬ್ಬನೆ ದೇವ, ಸತ್ಯವೇ ಸುಭಾಷೆ,**
**ಭೃತ್ಯಾಚಾರವೇ ಆಚಾರವಯ್ಯಾ,**
**ಮತ್ತೆ ದೇವರಿಲ್ಲ, ಮತ್ತೆ ಆಚಾರವಿಲ್ಲ,**
**ಮತ್ತೆ ಸುಭಾಷೆಯೆಂಬುದಿಲ್ಲ,**
**ಮಹಂತ ಸಕಳೇಶ್ವರದೇವರನೊಲಿಸಿದ ಪುರಾತನ**
**ಪಥವಿದು,**
**ಅವಿತಥವಿಲ್ಲದೆ ನಂಬುವದು.**

ಮಾನವನ ಬದುಕಿನೊಳಗೆ ನುಡಿ ನಡೆಗಳೆಲ್ಲವೂ ಮಹೋನ್ನತಿಯ ಸೊಬಗನ್ನು ಕೇಂದ್ರಕರಿಸಿಕೊಳ್ಳುವಲ್ಲಿ, ನಂಬುಗೆಯ ಪಾತ್ರವು ಅತ್ಯಂತ ಪ್ರಾಸಂಗಿಕವಾಗಿರುತ್ತದೆ. ನಮ್ಮಲ್ಲಿ ನಂಬಿಕೆಯು ಗಟ್ಟಿಯಾಗಿದ್ದಷ್ಟು ಸಹಚರರು ಮಾನ್ಯತೆ ಕೊಡುತ್ತಾರೆ. ಯಾರನ್ನು ನಾವು ವಿಶ್ವಾಸಕ್ಕೆ ತೆಗೆದುಕೊಳ್ಳಬೇಕಾದರೆ, ನಮ್ಮಲ್ಲಿ ಪರಿಪೂರ್ಣವಾದ ವಿಶ್ವಾಸವನ್ನು ಪಾಲಿಸಿಕೊಂಡು ಹೋಗುವ ಗಟ್ಟಿತನವಿರಬೇಕಾಗುತ್ತದೆ. ಈ ತೆರನಾದ ಗಟ್ಟಿಕೊಂಡ ವಿಶ್ವಾಸವೇ ಸುಭಾಷೆಯಾಗಿ ನಮ್ಮನ್ನು ಮತ್ತು ನಮ್ಮನ್ನು ನಂಬಿದವರನೆಂದೂ ಕೈ ಬಿಡಲಾರದು ಬದುಕಿನಲ್ಲಿ ಎಂತಹ ದುರ್ಭರ ಪ್ರಸಂಗವು ಬಂದರೂ, ಆ ಪ್ರಸಂಗಗಳು ವಿಶ್ವಾಸದ ನಮ್ಮ ನಡಾವಳಿಯನ್ನು ಎಂದೂ ವಿಚಲಿತಗೊಳಿಸಲಾರವು. ಅದರಂತೆ ನಾವು ಯಾವ ಕಾಲಕ್ಕೂ ತಪ್ಪು ದಾರಿಯೊಳಗೆ ನಿಲ್ಲುವ ಪ್ರಸಂಗ ಬರಲಾರದು. ಶರಣರು ನಡೆ-ನುಡಿಗಳಿಗೆ ಕೊಟ್ಟ ಪ್ರಾಶಸ್ತ್ಯವು, ವಿಶ್ವಮಾನ್ಯ ವಿಶ್ವಾಸಕ್ಕೆ ಪಾತ್ರರಾದ ಸಂಗತಿಗಲ್ಲಿ ಒಂದಾಗಿದೆ. ಯಾರು ಕೊಟ್ಟ ಮಾತಿಗೆ ತಪ್ಪಲಾರರು, ಅವರಿಗಿಂತ ಶ್ರೇಷ್ಠವಾದ ಮಾನವ ನಡಾವಳಿ ಇನ್ನೊಂದಿಲ್ಲ. ಯಾರನ್ನೂ ನೋಯಿಸದ ಮಾತು ಕೃತಿಗಳು ಸಾಂಗಗೊಂಡಲ್ಲಿ ವಿಶ್ವಶಾಂತಿಯು ತನ್ನಿಂದ ತಾನೇ ನೆಲೆಗೊಳ್ಳುವುದು.

ಶರಣರು ಎನಗಿಂತ ಕಿರಿಯರಿಲ್ಲ ಎಂದು ನಡೆದು-ನುಡಿದದ್ದು, ವಿಶ್ವದೊಳಗೆ ಮನುಷ್ಯನು, ಮನುಷ್ಯನಲ್ಲಿ ಹೊಂದಿರಬೇಕಾದ ವಿಶ್ವಾಸದ ಪ್ರತೀಕವೇ ಆಗಿದೆ. ಎಲ್ಲರೊಡನೆ ಬೆರೆತು ಯಾವುದೇ ತರ-ತಮ ಭಾವ ಹೊಂದದೆ ವಿಶ್ವಾಸಕ್ಕೆ ದ್ರೋಹ ಬಗೆಯದೇ ಜೀವಿಸುವುದೆಂದರೆ, ನಡೆ-ನುಡಿಯೊಳಗೆ ಯಾವುದೇ ಕೊಂಕು, ಮಂಕುತನ, ಮನೆ ಮುರುಕುತನಕ್ಕೆ ಅವಕಾಶವಿಲ್ಲದೇ ಬದುಕುವುದಾಗಿದೆ. ಇದನ್ನೇ ಶರಣರು ನಡೆ-ನುಡಿಯೊಳಗೆ ಮತ್ತೊಂದು ಕೇಳದಂತಿರಬೇಕೆಂದು ಹೇಳಿದ್ದಾರೆ. ಹೀಗೆ ಕೇಳದಂತೆ ಬಾಳುವುದೆಂದರೆ ಕುಭಾಷೆ-ಸುಭಾಷೆಯನ್ನು ದಾಟಿ ನಿರ್ಭಾವ ಸ್ಥಿತಿಯನ್ನು ಗಳಿಸುವುದೇ ಆಗಿದೆ.

